ಐಸಾಕ್ ಅಸಿಮೋವ್(1920–1992) ಅವರು ಬೋಸ್ಟನ್ ವಿಶ್ವವಿದ್ಯಾಲಯದಲ್ಲಿ ಜೀವರಸಾಯನಶಾಸ್ತ್ರ ವಿಭಾಗದ ಪ್ರಾಧ್ಯಾಪಕರಾಗಿದ್ದವರು. ವೈಜ್ಞಾನಿಕ ಕಾಲ್ಪನಿಕ ಕತೆಗಳು ಮತ್ತು ಜನಪ್ರಿಯ ವಿಜ್ಞಾನ ಬರಹಗಳು ಅಸಿಮೋವ್ ಅವರಿಗೆ ಜಗತ್ತಿನಾದ್ಯಂತ ಖ್ಯಾತಿಯನ್ನು ತಂದುಕೊಟ್ಟಿತು. ಇವರ ದಣಿವರಿಯದ ಲೇಖನಿಯಿಂದ ಐದುನೂರಕ್ಕೂ ಹೆಚ್ಚು ಪುಸ್ತಕಗಳು ಮತ್ತು ತೊಂಬತ್ತು ಸಾವಿರಕ್ಕೂ ಹೆಚ್ಚು ಪತ್ರವ್ಯವಹಾರಗಳು ನಡೆದಿವೆ.

ವಿ.ವಿ.ಎಸ್ ಶಾಸ್ತ್ರಿಯವರು ಗಣಿತ ಮತ್ತು ವಿಜ್ಞಾನ ಸಂವಹನಕಾರರು. ಜನವಿಜ್ಞಾನ ಚಳುವಳಿಯಲ್ಲಿ ಬಹುಸಮಯದಿಂದ ನಿರತರಾಗಿರುವವರು. ಇವರು ಸೃಜನಶೀಲ ಒರಿಗಾಮಿ ಮತ್ತು ಕಿರಿಗಾಮಿ ಕಲಾವಿದರೂ ಕೂಡ. ಗಣಿತೀಯ ಪರಿಕಲ್ಪನೆಗಳನ್ನು ಕಾಗದ, ಗೊಂಬೆಗಳನ್ನು ಬಳಸಿ ಅರ್ಥಮಾಡಿಸುವ ಕೌಶಲವುಳ್ಳ ಶಾಸ್ತ್ರಿಯವರು ಕರ್ನಾಟಕದ ಕೋಲಾರದಲ್ಲಿ ವಾಸಿಸುತ್ತಾರೆ.



ಭಾರತ ಜ್ಞಾನ ವಿಜ್ಞಾನ ಸಮಿತಿ–ಕರ್ನಾಟಕ
Bharat Gyan Vigyan Samiti - Karnataka

₹. 70/-

# ನಾವು ನಮ್ಮ ಮೂಲವನ್ನು ಅರಿತದ್ದು ಹೇಗೆ?

ಐಸಾಕ್ ಅಸಿಮೋವ್




ಅನುವಾದ–ವಿ.ಎಸ್.ಎಸ್. ಶಾಸ್ತ್ರಿ

# ನಾವು ನಮ್ಮ ಮೂಲವನ್ನು ಅರಿತದ್ದು ಹೇಗೆ?

ಐಸಾಕ್ ಅಸಿಮೋವ್



ಅನುವಾದ

ವಿ.ಎಸ್.ಎಸ್. ಶಾಸ್ತ್ರಿ



ಭಾರತ ಜ್ಞಾನ ವಿಜ್ಞಾನ ಸಮಿತಿ–ಕರ್ನಾಟಕ

**Bharat Gyan Vigyan Samiti - Karnataka**

ಬೆಂಗಳೂರು • Bengaluru

*Navu Namma Moolavannu Arithaddu Hege?*
written by Isaac Asimov

*Kannada Translation*
V.S.S Sastry

*Cover Design*
Subhankar Chakraborty

*Layout Design*
Murali K, Print Hut

*First Edition* 2011
*Reprint* November 2020

*Print run* 3000

*Price* 70 INR



*Printed at*
Print Hut
Govindarajnagar, Bengaluru

*Published by*
Bharat Gyan Vigyan Samiti (BGVS) - Karnataka
Second Floor, Old Chemical Engineering Building
Indian Institute of Science, Bengaluru 560 012
bgvskarnataka@gmail.com



**ಪ್ರಿಯ ಓದುಗರೇ,**

ನಾವು ನಮ್ಮ ಭೂತಕಾಲದ ಕುರಿತು ಕುತೂಹಲಿಗಳಾಗಿದ್ದೇವೆ. ಈ ಕುತೂಹಲವು ನಮಗೆ ಸಹಜವಷ್ಟೇ ಅಲ್ಲ, ಅವಶ್ಯಕ ಕೂಡಾ. ಎಲ್ಲ ಸಂಸ್ಕೃತಿಯ ಮತ್ತು ಎಲ್ಲ ಸಮಾಜದ ಆಧುನಿಕ ಮಾನವರು ತಮ್ಮ ಮೂಲವನ್ನು ಹುಡುಕುವ ತಮ್ಮದೇ ಪ್ರಯತ್ನಗಳನ್ನು ಮಾಡಿದ್ದಾರೆ, ಕನಿಷ್ಠ, ಆ ಪ್ರಯತ್ನದಲ್ಲಂತೂ ಇದ್ದಾರೆ.

ಈ ಬಗೆಯ ಸಾಂಸ್ಕೃತಿಕ ಕಥನಗಳು ನಮಗೆ ಬಹಳ ಮುಖ್ಯ. ಇವುಗಳನ್ನೆಲ್ಲ ಮೈಗೂಡಿಸಿಕೊಂಡೇ ನಮ್ಮ ವ್ಯಕ್ತಿತ್ವದ ನಿರ್ಮಾಣವಾಗುತ್ತದೆ. ವಿಜ್ಞಾನಿಗಳು, ಚರಿತ್ರಕಾರರು, ಭಾಷಾಶಾಸ್ತ್ರಜ್ಞರು, ಪ್ರಾಚ್ಯಶಾಸ್ತ್ರಜ್ಞರು ಹೀಗೆ ಬೇರೇ ಬೇರೆ ಶಿಸ್ತಿನಲ್ಲಿ ಅಧ್ಯಯನ ನಡೆಸುತ್ತಿರುವವರು ನಮ್ಮ ಮೂಲವನ್ನು ಅರಿಯುವ ಪ್ರಯತ್ನ ನಡೆಸಿದ್ದಾರೆ. ಹೀಗೆ, ನಮ್ಮ ಪೂರ್ವೇತಿಹಾಸದ ಕುರಿತಾಗಿ ಹೆಚ್ಚು ಆಳದ ಮತ್ತು ಹೆಚ್ಚು ಸ್ವೀಕಾರಾರ್ಹ ತಿಳುವಳಿಕೆಗಳು ದೊರೆಯುತ್ತಿದ್ದಂತೆ ಕೆಲವು ತಪ್ಪಿ ಹೋಗಿರುವ ಕೊಂಡಿಗಳನ್ನು ಹುಡುಕಿ, ಮರುಸಂಘಟಿಸಿಕೊಳ್ಳಲು ಈ ಬಗೆಯ ಬಹುಶಿಸ್ತಿನ ಅಧ್ಯಯನಗಳು ಅನುವುಮಾಡಿಕೊಟ್ಟಿವೆ.

'ನಾವು ನಮ್ಮ ಮೂಲವನ್ನು ಹೇಗೆ ಅರಿತೆವು?' ಇದು ಪ್ರಖ್ಯಾತ ವಿಜ್ಞಾನ ಬರಹಗಾರರಾದ ಐಸಾಕ್ ಅಸಿಮೋವ್ರವರು 1979 ರಲ್ಲಿ ಇಂಗ್ಲೀಷಿನಲ್ಲಿ ಪ್ರಕಟಿಸಿದ ಪುಸ್ತಕ. ಈ ಪುಸ್ತಕದಲ್ಲಿ ಅವರು ಪ್ರಾಚೀನ ಮಾನವನ ಕುರಿತಾದ ಅಧ್ಯಯನದ ಇತಿಹಾಸವನ್ನು ಕೆದಕಿದ್ದಾರೆ. ಈ ಪುಸ್ತಕದ ಮೊದಲ ಆವೃತ್ತಿಯನ್ನು ನಾವು 2011 ರಲ್ಲಿ ಕನ್ನಡದಲ್ಲಿ ಪ್ರಕಟಿಸಿದೆವು.

ಅಸಿಮೋವ್ ಅವರು ಈ ಪುಸ್ತಕವನ್ನು ಪ್ರಕಟಿಸಿದ ನಂತರ ಮಾನವನ ಮೂಲದ ಕುರಿತು ಅನೇಕ ಮಹತ್ವದ ಅಧ್ಯಯನಗಳು ನಡೆದಿವೆ. ಹೊಸ ಸಂಗತಿಗಳು ಬೆಳಕಿಗೆ ಬಂದಿವೆ. ಇವುಗಳ ಜೊತೆಗೆ, ಈ ಹಿಂದೆ ದೊರೆಯದ ಮನುಷ್ಯನ ಪಳೆಯುಳಿಕೆಗಳ ಪತ್ತೆಯಾಗಿವೆ. ಪೂರ್ವೇತಿಹಾಸದ ಕುರಿತಾದ ಇನ್ನಷ್ಟು ಪುರಾತನ ಪುರಾವೆಗಳನ್ನು ಅಗೆದು ತೆಗೆಯಲಾಗಿದೆ. ಮನುಷ್ಯನ ಅನುವಂಶೀಯ ವಸ್ತುಗಳ ಮಹತ್ವದ ಅಧ್ಯಯನವಾದ ಹ್ಯೂಮನ್ ಜೀನೋಮ್ ಪ್ರಾಜೆಕ್ಟ್ (1990–2003) ಎಂಬ ವಂಶವಾಹಿಗಳ ಮಹಾಮೋಜಣಿ ನಡೆದಿದೆ. 'ನಾವು ನಮ್ಮ ಮೂಲವನ್ನು ಹೇಗೆ ಅರಿತೆವು?' ಪುಸ್ತಕವನ್ನು ಬರೆಯುವಾಗ ಅಸಿಮೋವ್ ಅವರಿಗೆ ಇವೆಲ್ಲವೂ ಲಭ್ಯವಿರಲಿಲ್ಲ.

ಆದರೆ, ಐಸಾಕ್ ಅಸಿಮೋವ್ ಈ ಪುಸ್ತಕದ ಮೂಲಕ ಪುರಾವೆಗಳ ಮೂಲಕವೇ ಕಟ್ಟಲ್ಪಡುವ, ಪುರಾವೆಗಳನ್ನು ಮತ್ತೆ ಪ್ರಶ್ನಿಸುವ, ಹೆಜ್ಜೆ ಹೆಜ್ಜೆಗೂ ಅನುಮಾನ ಮತ್ತು ಪ್ರಮಾಣಗಳನ್ನು ಆಧಾರವಾಗಿಟ್ಟುಕೊಂಡು ಫಲಿತಗಳನ್ನು

ಸ್ವೀಕರಿಸುವ ಅಥವಾ ನಿರಾಕರಿಸುವ ಸಂಶೋಧನೆಯ ಮಾರ್ಗವನ್ನು ಓದುಗರು ಎದುರಿಡುತ್ತಾರೆ. ಸಂಶೋಧನೆಗಳು ಎಷ್ಟು ಮುಖ್ಯವೋ ಆ ಸಂಶೋಧನೆಗಳ ಇತಿಹಾಸ ಮತ್ತು ಅವುಗಳಿಗಾಗಿ ಬಳಸಿದ ವಿಧಾನವೂ ಅಷ್ಟೇ ಮುಖ್ಯ.

ಜನರ ಆಸಕ್ತಿಯ ಬರವಣಿಗೆಯಲ್ಲಿ ನಿರತರಾಗಿದ್ದ ಅಸಿಮೋವ್, ಮಾನವ ಇತಿಹಾಸದ ಕುರಿತಾದ ಬರವಣಿಗೆಯು ಬಹುಚರ್ಚಿತ ವಿಷಯವಾಗಿದ್ದರೂ ಆ ವಿಷಯದ ಕುರಿತು ಏಕೆ ಜನರು ಅಷ್ಟು ಆಸಕ್ತಿಯನ್ನು ಇಟ್ಟುಕೊಂಡಿರುವರು ಎಂಬುದಕ್ಕೆ ತಮ್ಮದೇ ನಿರೂಪಣೆ ನೀಡುತ್ತಾರೆ.

ಈ ಪುಸ್ತಕದ ಕರಡು ತಿದ್ದುವಿಕೆ ಮತ್ತು ಚಿತ್ರಗಳನ್ನು ಅಂತಿಮಗೊಳಿಸುವಲ್ಲಿ ಕೊಡುಗೆ ನೀಡಿದ ಮಧುರಾಣಿ ಮತ್ತು ಅರವಿಂದ ಕುಡ್ಲ ಅವರಿಗೆ ಧನ್ಯವಾದಗಳು.

ಪ್ರಕಟಣಾ ಉಪ ಸಮಿತಿ
ಭಾರತ ಜ್ಞಾನ ವಿಜ್ಞಾನ ಸಮಿತಿ, ಕರ್ನಾಟಕ



## ಪಾಷಾಣ ಯುಗ

ಬೈಬಲ್ಲಿನ ಪ್ರಕಾರ ಮೊದಲ ಮಾನವರೆಂದರೆ ಆದಮ್ ಮತ್ತು ಈವ್. ಅವರು ಇಂದಿನ ಮಾನವರಂತೆಯೇ ಇದ್ದರು. ಆಧುನಿಕ ಯುಗದವರೆಗೂ, ಯಹೋದಿಗಳು, ಕ್ರಿಶ್ಚಿಯನ್ನರು ಮತ್ತು ಮುಸಲ್ಮಾನರು ಇದನ್ನು ನಂಬಿದ್ದರು. ಆದಮ್ ಮತ್ತು ಈವ್‌ರು ಹುಟ್ಟಿ ಎಷ್ಟು ವರ್ಷಗಳಾದುವು? ಬೈಬಲ್‌ನಲ್ಲಿ ಇದಕ್ಕೆ ಉತ್ತರವಿಲ್ಲ. ಆದರೆ ಬೈಬಲ್ ಓದಿದ ಜನ ಇದರ ಸೂಚನೆಗಳನ್ನು ಬೈಬಲ್ಲಿನಲ್ಲಿ ತಡಕಾಡಿ ಒಂದು ತಾರ್ಕಿಕ ತೀರ್ಮಾನವನ್ನು ಪೋಣಿಸುತ್ತಾರೆ. ಉದಾಹರಣೆಗೆ, ಜೆರೂಸಲೆಮ್ ಅನ್ನು ಬ್ಯಾಬಿಲೋನಿಯನ್ನರು ಸೆರೆ ಹಿಡಿದು ಅಲ್ಲಿನ ದೇವಾಲಯವನ್ನು ಕ್ರಿ.ಪೂ. 586ರಲ್ಲಿ ಸುಟ್ಟುಹಾಕಿದರು.

ಇದನ್ನು ಮೂಲವಾಗಿಟ್ಟುಕೊಂಡು ಗತವನ್ನು ಯೋಚಿಸಬಹುದು. ಬೈಬಲ್ಲಿನಲ್ಲಿ ಉದಾಹರಿಸಿರುವ ರಾಜರು ಎಷ್ಟು ವರ್ಷ ಆಡಳಿತ ಮಾಡಿರಬಹುದೆಂದು ಅಂದಾಜಿಸಿ ಈ ಕಾಲಮಾನವನ್ನು ನಿರ್ಧರಿಸಲಾಗುವುದು. ನೋವಾ ಮತ್ತು ಅಬ್ರಹಾಂರವರು ಎಷ್ಟು ವರ್ಷ ಜೀವಿಸಿದ್ದರು? ಇವರು ಹುಟ್ಟಿದಾಗ ಇವರ ತಂದೆತಾಯಿಯರಿಗೆ ಎಷ್ಟು ವಯಸ್ಸಾಗಿರಬಹುದು? ಕ್ರಿ.ಶ.1630ರಲ್ಲಿ ಜೇಮ್ಸ್ ಉಶ್ಶೈರ್ (1581–1656) ಎಂಬ ಐರ್‌ಲೆಂಡಿನ ಪಂಡಿತನು ಹೀಗೆ ಯೋಚಿಸಿದನು ಮತ್ತು ಅವನು ಭೂಮಿಯ ಸೃಷ್ಟಿಯು ಕ್ರಿ.ಪೂ 4004ನೇ ಇಸವಿಯಲ್ಲಿ ಆಗಿರಬೇಕೆಂದು ತರ್ಕಿಸಿದನು. ಹಾಗಾಗಿ ಇವರ ಪ್ರಕಾರ ಭೂಮಿಯ ಆಯಸ್ಸು ಸುಮಾರು 6000 ವರ್ಷಗಳು.

ಇದು ಹಾಗಿರಲಿ, ಬೈಬಲ್ಲನ್ನು ಬಿಟ್ಟು ಬೇರೆ ಸಾಕ್ಷಿಗಳು ಇವೆಯೇ? ಇದ್ದರೆ ಅದು ಭೂಮಿಯ ನಿಖರವಾದ ವಯಸ್ಸನ್ನು ತಿಳಿಸಬಹುದೇ? ಉಶ್ಶೈರ್‌ನ ಸಮಯದಲ್ಲಿ ಮಾನವ ಚರಿತ್ರೆಯು ಬಹಳ ಹಿಂದಿನ ಕಾಲಕ್ಕೆ ಚಾಚಿರಲಿಲ್ಲ. ರೋಮ್ ಸಾಮ್ರಾಜ್ಯದ ಚರಿತ್ರೆ ಗೊತ್ತಿತ್ತಾದರೂ ರೋಮ್ ಹುಟ್ಟಿದ್ದೇ ಕ್ರಿ.ಪೂ. 753ರಲ್ಲಿ.

ಪುರಾತನ ಗ್ರೀಕ್ ಚರಿತ್ರೆ ಇದಕ್ಕೂ ಹಳೆಯದು. ಮೊಟ್ಟಮೊದಲನೆಯ ಒಲಂಪಿಕ್ ಕ್ರೀಡೆಗಳು ನಡೆದದ್ದು ಕ್ರಿ.ಪೂ. 766ರಲ್ಲಿ. ಅತಿರಂಜಿತ ಟ್ರೋಜನ್ ಯುದ್ಧವು ಬಹುಶಃ ಕ್ರಿ.ಪೂ. 1200ರಲ್ಲಿ ಆಗಿರಬೇಕು. ಇವೆಲ್ಲ ಬೈಬಲ್ ಹೇಳುವ

ಸೃಷ್ಟಿಗಿಂತ ಬಹಳ ಹೊಸವು. ಗ್ರೀಸ್ ಚರಿತ್ರೆಗೂ ಹಿಂದಿನ ಮಾನವ ಚರಿತ್ರೆ ಇರಬಹುದೇ?

ಗ್ರೀಕ್ ಚರಿತ್ರಕಾರರು ಈಜಿಪ್ಟ್‌ನ ಚರಿತ್ರೆಯು ತಮ್ಮದಕ್ಕಿಂತಲೂ ಹಳೆಯದೆಂದು ಭಾವಿಸಿದ್ದರು. ಪುರಾತನ ಈಜಿಪ್ಟ್ ನಾಗರೀಕತೆಯ ಅನೇಕ ಬರಹಗಳೂ, ಕೆತ್ತನೆಗಳೂ ಹಾಗೂ ಬಣ್ಣ ಹಚ್ಚಿದ ಚಿತ್ರಗಳೂ ಸಿಕ್ಕಿವೆ. ಆದರೆ ಇದೆಲ್ಲವನ್ನು ಯಾರೂ ಓದಲಾಗುತ್ತಿರಲಿಲ್ಲ. ಈಜಿಪ್ಟ್‌ನ ಬರಹದ ಬಗ್ಗೆ ತಿಳಿಯಲು ಬೇರೆ ದಾರಿಯೇ ಇಲ್ಲ ಎಂದೆನಿಸಿತ್ತು.

ಆದರೆ 1799ರಲ್ಲಿ ನೆಪೋಲಿಯನ್ ಬೋನಾಪಾರ್ಟೆಯ ನೇತೃತ್ವದಲ್ಲಿ ಫ್ರೆಂಚ್ ಸೈನ್ಯವು ಈಜಿಪ್ಟ್‌ನ ಮೇಲೆ ದಾಳಿ ಮಾಡಿದ. ಈ ದಾಳಿಯಲ್ಲಿದ್ದ ಸೈನ್ಯಾಧಿಕಾರಿಯೊಬ್ಬನಿಗೆ ಅಲ್‌ರಷೀದ್ ಎಂಬ ಹಳ್ಳಿಯಲ್ಲಿ ಒಂದು ಶಾಸನ ಸಿಕ್ಕಿತು. ಅದು ಈಗ ರೋಸೆಟ್ಟಾ ಶಿಲೆ ಎಂದೇ ಪ್ರಸಿದ್ಧವಾಗಿದೆ. ಇದರಲ್ಲಿ ಮೂರು ಭಾಷೆಗಳ ಬರಹಗಳಿದ್ದವು. ಒಂದು ಗ್ರೀಕ್, ಇನ್ನೆರಡು ಈಜಿಪ್ಷಿಯನ್ ಲಿಪಿಗಳು, ಚರಿತ್ರಕಾರರಿಗೆ ಗ್ರೀಕ್ ಲಿಪಿ ಮತ್ತು ಭಾಷೆಗಳ ಜ್ಞಾನವಿದ್ದಿತು. ರೋಸೆಟ್ಟಾ ಶಾಸನದಲ್ಲಿ ಗ್ರೀಕ್ ಭಾಷೆಯ ಲಿಪಿಯು ಈಜಿಪ್ಷಿಯನ್ ಭಾಷೆಯ ಅನುವಾದವೇ ಆಗಿದ್ದಿತು. ಗ್ರೀಕ್ ಭಾಷೆಗೆ ತತ್ಸಮವಾದ ಈಜಿಪ್ಷಿಯನ್ ಲಿಪಿಯನ್ನು ತಿಳಿಯಬಹುದಾಗಿತ್ತು. ಥಾಮಸ್ ಯಂಗ್ (1773–1829) ಎಂಬ ವಿಜ್ಞಾನಿಯು 1818ರಲ್ಲಿ ಈ ಬಗ್ಗೆ ಶೋಧನೆ ಆರಂಭಿಸಿದನು. ನಂತರ ಫ್ರೆಂಚ್ ಪಂಡಿತನಾದ ಶಾಂಪೋಲಿಯನ್ ಈ ಶೋಧಕಾರ್ಯವನ್ನು ಪೂರ್ಣಗೊಳಿಸಿದನು.

ಈಜಿಪ್ಟ್ ಲಿಪಿಯನ್ನು ಶೋಧಿಸಿದ ಚರಿತ್ರಕಾರರು ನಿಧಾನವಾಗಿ ಈಜಿಪ್ಟ್‌ನ ಚರಿತ್ರೆಯನ್ನು ಪತ್ತೆ ಹಚ್ಚತೊಡಗಿದರು. ಈಜಿಪ್ಟ್ ಸಾಮ್ರಾಜ್ಯವು ಕ್ರಿ.ಪೂ.2850ರಲ್ಲಿ ಹುಟ್ಟಿತೆಂದೂ, ಅತಿದೊಡ್ಡ ಪಿರಮಿಡ್‌ಅನ್ನು ಕಟ್ಟಿದ್ದು ಕ್ರಿ.ಪೂ. 2500ರಲ್ಲೆಂದೂ ತಿಳಿದುಬಂದಿತು.

ಇದರ ಬಳಿಕ ಕ್ರಿ.ಶ. 1845ರಲ್ಲಿ ಈಗಿನ ಇರಾನ್ ದೇಶದಲ್ಲಿ ಅತಿ ಮುಖ್ಯ ಶಾಸನವೊಂದು ಸಿಕ್ಕಿತು. ಇದರಲ್ಲಿ ಅನೇಕ ಭಾಷೆಗಳಲ್ಲಿ ಬರೆದ ಅನೇಕ ಲಿಪಿಗಳಿದ್ದವು. ಇದರಲ್ಲಿ ಟೈಗ್ರಿಸ್ ಮತ್ತು ಯುಫ್ರಟಿಸ್ ನದಿಗಳ ನಡುವೆ ಉದಯಿಸಿದ್ದ ಸಾಮ್ರಾಜ್ಯವಾದ 'ಸುಮೇರು' ಭಾಷೆಯೂ ಇದ್ದಿತು. ಈಗ ಈ ಭಾಗವು ಇರಾಕ್‌ನಲ್ಲಿದೆ. ಸುಮೇರು ಸಾಮ್ರಾಜ್ಯದ ಚರಿತ್ರೆಯು ಈಜಿಪ್ಟ್‌ಗಿಂತಲೂ ಪುರಾತನವಾದದ್ದೆಂದು ತಿಳಿದುಬಂತು. ಬರಹವನ್ನು ಕಂಡು ಹಿಡಿದವರು ಇದೇ ನಾಗರಿಕತೆಯವರು ಹಾಗು ಇವರ ಕಾಲ ಕ್ರಿ.ಪೂ 3200 ಆಗಿದ್ದಿತು. ಇವೆಲ್ಲ ಸಂಗತಿಗಳು ಬೈಬಲ್ಲಿನಲ್ಲಿದ್ದ ಹೇಳಿಕೆಗಳಿಗೆ ಸರಿಹೊಂದುವಂತಿದ್ದವು. ಕ್ರಿ.ಪೂ. 4004ರಲ್ಲಿ ಭೂಮಿ ಸೃಷ್ಟಿಯಾಗಿದ್ದರೆ,



'ಸುಮೇರು' ನಾಗರಿಕತೆ ಅತಿ ಪುರಾತನವಾದದ್ದು ಎಂದಾದರೂ ಇತಿಹಾಸದಲ್ಲಿ ಇತರ ನಾಗರಿಕತೆಗಳಿಗೂ ಜಾಗವಿದ್ದಿತು.

ಈ ನಡುವೆ ಭೂವಿಜ್ಞಾನ ಶಾಸ್ತ್ರದಲ್ಲಿ ಅನೇಕ ಬೆಳವಣಿಗೆಗಳಾಗತೊಡಗಿದ್ದವು. ಭೂಮಿಯೊಳಗಿನ ಶಿಲೆಗಳ ಅಧ್ಯಯನವೇ ಈ ಶಾಸ್ತ್ರದ ಮೂಲ ತಿರುಳು.

ಸ್ಕಾಟ್‌ಲೆಂಡಿನ ಭೂಶಾಸ್ತ್ರಜ್ಞನಾದ ಜೇಮ್ಸ್ ಹಟ್ಟನ್ (1726–1797) ಎಂಬುವವನು ಶಿಲೆಗಳು ಉಂಟಾಗುವ ವಿಧಾನವನ್ನು ಅಧ್ಯಯನ ಮಾಡಿದನು. ಕೆಲವು ಶಿಲೆಗಳು ಮಣ್ಣನ್ನು ಮುದ್ದೆ ಮಾಡಿ, ಅದನ್ನು ವಿಪರೀತ ಒತ್ತಡಕ್ಕೆ ಒಳಪಡಿಸಿದಾಗ ಅದುವೆಂದು ತಿಳಿದುಬಂದಿತು. ಇದನ್ನು 'ಪದರಶಿಲೆ' ಎಂದು ಕರೆದನು. ಏಕೆಂದರೆ ಮಣ್ಣು ರಾಡಿಯಾಗಿ ನಿಂತಾಗ ತಳದಲ್ಲಿ ಸಂಗ್ರಹವಾಗುವಂತೆಯೇ ಈ ಪ್ರಕ್ರಿಯೆಯಾಗುತ್ತದೆ.



ಜೇಮ್ಸ್ ಹಟ್ಟನ್ ಕಂಡುಹಿಡಿದ ಸುಮಾರು ಕ್ರಿ.ಪೂ 4004 ರದ್ದು ಎನ್ನಲಾದ ಶಿಲಾಪದರದ ಸೀಳುನೋಟ. ಚಿತ್ರಕೃಪೆ Wikimedia commons

ಇನ್ನು ಕೆಲವು ಶಿಲೆಗಳು ಅಗ್ನಿಪರ್ವತಗಳಿಂದ ಹೊರಬಿದ್ದ ಬಿಸಿ ಲಾವಾ ತಣ್ಣಗಾದಾಗ ಉಂಟಾದವು. ಗಾಳಿ ಮತ್ತು ನೀರಿನ ಕ್ರಿಯೆಗಳಿಂದ ಎಲ್ಲಾ ಶಿಲೆಗಳೂ ಸವೆದು ಮಣ್ಣಾಗುತ್ತವೆಂದೂ ಸಹ ತಿಳಿದುಬಂದಿತು. ಶಿಲೆಗಳು ಉಂಟಾಗುವುದು, ಅವುಗಳ ಸವಕಳಿಯಾಗುವ ಪ್ರಕ್ರಿಯೆಗಳು ಅತಿ ನಿಧಾನವಾಗಿ ಆಗುತ್ತವೆಂದು ತಿಳಿಯಿತು. ಶಿಲೆಗಳು ಉಂಟಾಗಲು ಮಿಲಿಯನ್‌ಗಟ್ಟಲೆ ವರ್ಷಗಳು ಬೇಕು. ಈ ವಿಚಾರಗಳನ್ನು ಮುಂದಿಟ್ಟುಕೊಂಡು 1785ರಲ್ಲಿ ಜೇಮ್ಸ್ ಹಟ್ಟನ್, ಭೂಮಿಯು ಅತಿ ಪುರಾತನ ಕಾಲದ್ದೆಂದು ತನ್ನ ವಾದವನ್ನು ಮಂಡಿಸಿದನು.

ಇದರ ಅರ್ಥ ಕ್ರಿ.ಪೂ. 4004ಕ್ಕಿಂತಲೂ ಹಿಂದಿನಿಂದಲೂ ಮಾನವರು ಭೂಮಿಯ ಮೇಲೆ ಜೀವಿಸಿದ್ದಿರಬಹುದು. ಚರಿತ್ರಕಾರರಿಗೆ ಕೆಲವು ವಿಷಯಗಳ ಅರಿವಿದ್ದಿತು. ಉದಾಹರಣೆಗೆ ಮಾನವರಿಗೆ ಕಬ್ಬಿಣ ತಯಾರಿಸುವ ಬಗ್ಗೆ ಗೊತ್ತಿರದ ಕಾಲವೊಂದಿತ್ತು. ಮಾನವರಿಗೆ ಇದು ತಿಳಿದಿದ್ದು ತೀರಾ ಇತ್ತೀಚೆಗೆ, ಅಂದರೆ ಕ್ರಿ.ಪೂ. 1000ದಿಂದ ಇರಬಹುದು. ಇದಕ್ಕೆ ಪುರಾವೆಯಾಗಿ ಗ್ರೀಕ್ ಪುರಾಣ ಇಲಿಯಡ್‌ನಲ್ಲಿ ಬರುವ ಟ್ರೋಜನ್ ಯುದ್ಧದಲ್ಲಿ ಬಳಕೆಯಾಗಿದ್ದೆಲ್ಲವೂ ಕಂಚಿನ ಆಯುಧಗಳೇ.

ಕಂಚಿನ ಉಪಯೋಗ ಶುರುವಾದದ್ದು ಕ್ರಿ.ಪೂ. 3200ರಲ್ಲಿ. ಇದೇ ಸಮಯದಲ್ಲಿಯೇ ಬರಹವೂ ಸಹ ಜಾರಿಗೆ ಬಂದಿತು. ಇದಕ್ಕೂ ಮೊದಲು ಲೋಹದ ಬಳಕೆಯ ಕುರುಹುಗಳಿಲ್ಲ. ನಮಗೆ ಸಿಗುವ ಉಪಕರಣಗಳೂ ಆಯುಧಗಳೂ ಕಲ್ಲಿನಿಂದಲೇ ಮಾಡಿದವು. ನಮ್ಮ ಚರಿತ್ರೆಯು ಶುರುವಾಗುವುದು ಯಾವಾಗ? ಬರಹ ಶುರುವಾದಾಗಿನಿಂದಲ್ಲವೇ? ಮಾನವರಿಗೆ ಬರೆಯಲು ಗೊತ್ತಿಲ್ಲದ ಸಮಯದಲ್ಲಿ ನಮಗೆ ಅವರ ನಾಗರಿಕತೆಯ ಬಗ್ಗೆ ಕುರುಹುಗಳು ಸಿಗಬೇಕಾದರೆ ಅವರು ಕಟ್ಟಿದ ಮನೆಗಳ, ದೇವಾಲಯಗಳ ಮತ್ತು ಉಪಕರಣಗಳ ಅವಶೇಷಗಳಿಂದ ಮಾತ್ರ ಸಾಧ್ಯ. ಇವುಗಳಿಂದ ಅನೇಕ ವಿಷಯಗಳು ನಮಗೆ ತಿಳಿದು ಬಂದರೂ ಸಹ, ಅವು ಯಾವ ಕ್ರಮದಲ್ಲಿ ಬಳಕೆಗೆ ಬಂದವು ಎಂಬುದು ತಿಳಿಯುವುದಿಲ್ಲ. ಚರಿತ್ರೆಯೆಂದರೆ ಯಾವ ಕ್ರಮದಲ್ಲಿ ನಾಗರಿಕತೆ ಬೆಳೆಯಿತು ಎಂಬ ವಿಷಯ ತಾನೆ!

ಹಾಲೆಂಡ್‌ನ ವಿಜ್ಞಾನಿಯಾದ ಕ್ರಿಶ್ಚಿಯನ್ ಜೊರ್ಗೆನ್‌ಸನ್ ಥಾಮ್ಸನ್ (1788–1865) ಇದೆಲ್ಲಾ ವಿಷಯಗಳನ್ನು ಕ್ರೋಢೀಕರಿಸಿ 1834ರಲ್ಲಿ ಹೀಗೆ ನುಡಿದ "ನಾವೀಗ ಇರುವುದು ಕಬ್ಬಿಣ ಯುಗದಲ್ಲಿ. ಇದಕ್ಕಿಂತ ಹಿಂದೆ ಇದ್ದದ್ದು ಕಾಂಸ್ಯಯುಗ, ಅದಕ್ಕೂ ಹಿಂದೆ ಇದ್ದದ್ದು ಶಿಲಾಯುಗ". ಬರಹ ಬರುವ ಮೊದಲು ಇದ್ದ ಚರಿತ್ರೆಯನ್ನು, ಚರಿತ್ರೆಯ ಪೂರ್ವಯುಗ (Prehistoric) ಎಂದೆನ್ನುತ್ತಾರೆ. ಶಿಲಾಯುಗವು ಚರಿತ್ರೆಯ ಪೂರ್ವಯುಗ. ಅಂದಿನ ಕಾಲದಲ್ಲಿದ್ದ ಜನರು ಚರಿತ್ರೆಯ ಪೂರ್ವಯುಗದ ಜನರು.

ಪುರಾತನ ಈಜಿಪ್ಟ್ ಮತ್ತು ಸುಮೇರಿಯನ್‌ರ ಕಾಲದ ಕಲ್ಲಿನ ಉಪಕರಣಗಳು ಸಿಕ್ಕಿವೆಯಾದರೂ ಇವುಗಳ ಗುಣಮಟ್ಟವು ಶ್ರೇಷ್ಠವಾಗಿದೆ. ಹಾಗಾದರೆ ಮಾನವರು ಈ ಗುಣಮಟ್ಟ ತಲುಪುವುದಕ್ಕೂ ಮೊದಲಿನ ಕಾಲಾವಧಿಯೂ ಇರಬೇಕು. ಈಜಿಪ್ಟ್ ಮತ್ತು ಸುಮೇರಿಯನ್ ನಾಗರಿಕತೆಗಳಿಗಿಂತಲೂ ಸಾವಿರಾರು ವರ್ಷಗಳ ಮುಂಚಿನ ಕಚ್ಚಾ ಉಪಕರಣಗಳು ಇದ್ದೇ ಇರಬೇಕು.





ಶಿಲೆಗಳಿಂದ ಮಾನವ ಮಾಡಿ ಬಳಸುತ್ತಿದ್ದ ಆಯುಧಗಳು.
ಚಿತ್ರಕೃಪೆ/Project Gutenberg

ಇಂಗ್ಲೆಂಡಿನ ದಕ್ಷಿಣ ಭಾಗದಲ್ಲಿ, 1797ರಲ್ಲಿ ಭೂಶಾಸ್ತ್ರಜ್ಞನಾದ ಜಾನ್‌ಫ್ರೇರೀ (1740–1807) ಇಂತಹ ಪುರಾತನ ಉಪಕರಣಗಳನ್ನು ಶೋಧಿಸಿದನು. ಪೂರ್ವಿಕರು ಈ ಉಪಕರಣಗಳನ್ನು ಎಸೆದು ಹೋಗಿರಬೇಕು, ಏಕೆಂದರೆ ಇವು ಈ ಭೂಶಾಸ್ತ್ರಜ್ಞನಿಗೆ ಹದಿಮೂರು ಅಡಿ ಆಳದಲ್ಲಿ ದೊರಕಿದ್ದವು. ಹದಿಮೂರು ಅಡಿಯವರೆಗೆ ಮಣ್ಣು ಮುಚ್ಚಿಕೊಳ್ಳಲು ಎಷ್ಟು ವರ್ಷವಾಗಿರಬಹುದು? ಈ ಬಗೆಯ ಲೆಕ್ಕಾಚಾರ ಮಾಡಿದ ಈ ಭೂಶಾಸ್ತ್ರಜ್ಞನು ಈ ಉಪಕರಣಗಳು ಸಾವಿರಾರು ವರ್ಷಗಳ ಹಳೆಯದೆಂಬ ತೀರ್ಮಾನಕ್ಕೆ ಬಂದನು. ಈ ಉಪಕರಣಗಳ ಜೊತೆಗೆ ಪ್ರಾಣಿಗಳ ಮೂಳೆ ಚೂರುಗಳೂ ದೊರೆತವು. ಆದರೆ ಈ ಪ್ರಾಣಿಗಳಾವುವೂ ಇಂದು ಜೀವಿಸಿಲ್ಲ. ಇವು ಈಗಾಗಲೇ ಕಣ್ಮರೆಯಾದ ಪ್ರಾಣಿ ಪ್ರಭೇದಗಳು. ಈ ಮೂಳೆಗಳು ಎಷ್ಟು ಹಳೆಯದೆಂದರೆ ಅವುಗಳು ಕಾಲಕ್ರಮೇಣ ಕಲ್ಲಾಗಿಬಿಟ್ಟಿದ್ದವು. ಈ ಬಗೆಯ ಪ್ರಾಚೀನ ಮೂಳೆ ಅಥವಾ ಜೀವ ವಿಶೇಷಗಳನ್ನು ಪಳೆಯುಳಿಕೆಗಳು ಎನ್ನುತ್ತಾರೆ. (fossil–ಲ್ಯಾಟೀನ್ ಭಾಷೆಯಲ್ಲಿ ಅಗೆ ಎನ್ನುವ ಅರ್ಥಕೊಡುವ ಪದದಿಂದ).

ಜಗತ್ತಿನ ಇತರೆಡೆಗಳಲ್ಲೂ ಈ ಬಗೆಯ ಪಳೆಯುಳಿಗೆಗಳು ಶೋಧವಾಗತೊಡಗಿದವು. 1860ರಲ್ಲಿ ಪಳೆಯುಳಿಗೆಗಳ ತಜ್ಞನಾದ (Paleontalogist) ಎಡ್ವರ್ಡ್ ಅರ್ಮಂಡ್ ಲಾರ್ಟೆಟ್ (1801–71) ಎಂಬುವನು ಗುಹೆಯೊಂದರಲ್ಲಿ ಮಾಮ್ಮತ್‌ನ (ಪ್ರಾಚೀನ ಕಾಲದ ದೈತ್ಯ ಆನೆ) ಹಲ್ಲನ್ನು ಶೋಧಿಸಿದ. ಈ ಮಾಮ್ಮತ್‌ಗಳು ನಶಿಸಿಹೋಗಿರುವ ಪ್ರಾಣಿಗಳು. ಈಗಿರುವ ಆನೆಗಳಿಗೆ ಸಂಬಂಧಿಗಳೇ ಆದರೂ ಸಾವಿರಾರು ವರ್ಷಗಳ ಹಿಂದಿನಿಂದಲೂ ಅವು ಬದುಕುಳಿದಿರುವ ದಾಖಲೆಗಳಿಲ್ಲ.

ಈ ಮಾಮ್ಮತ್‌ನ ಹಲ್ಲಿನ ಮೇಲೆ, ಮಾಮ್ಮತ್ ಒಂದರ ಚಿತ್ರವನ್ನು ಕೊರೆದಿದ್ದರು. ಆ ಚಿತ್ರ ಮಾಮ್ಮತ್‌ನ ಹಾಗೇ ಇದ್ದಿತು. ಮಾಮ್ಮತ್ ಹೇಗಿದ್ದಿರಬಹುದೆಂದು ಅಲ್ಲಲ್ಲಿ ಸಿಕ್ಕ ಮೂಳೆಗಳಿಂದ ವಿಜ್ಞಾನಿಗಳ ತಲೆಯಲ್ಲಿ ಚಿತ್ರವೊಂದು ಮೂಡಿತ್ತು. ಅದೂ ಅಲ್ಲದೆ ಹಲ್ಲಿನ ಮೇಲೆ ಕೊರೆದ ಚಿತ್ರದಲ್ಲಿ ಒಬ್ಬ ನುರಿತ ಕಲಾಕಾರನೊಬ್ಬನು ತನ್ನ ಮುಂದಿರುವ ಪ್ರಾಣಿಯ ಚಿತ್ರವನ್ನು ಬರೆದಂತೆ, ಎಲ್ಲ ವಿವರಗಳೂ ಇದ್ದವು. ಆಗ ವಿಜ್ಞಾನಿಗಳು ಮಾಮ್ಮತ್‌ನ ಕಾಲದಲ್ಲಿ ಮಾನವನು ಇದ್ದೇ ಇರಬೇಕೆಂಬ ತೀರ್ಮಾನಕ್ಕೆ ಬಂದರು. ಆಗ ವಿಜ್ಞಾನಿಗಳು ಪೂರ್ವಶಿಲಾಯುಗ ಮತ್ತು ನವಶಿಲಾಯುಗಗಳೂ ಇರಲೇಬೇಕೆಂದು ತೀರ್ಮಾನಿಸಿದರು. ಅಲ್ಲಲ್ಲಿ ಸಿಕ್ಕ ಶಿಲಾಯುಧಗಳನ್ನು ಅಧ್ಯಯನ ಮಾಡಿ ಅವುಗಳ ಕಾಲವನ್ನು ಸಾಧ್ಯವಾದಷ್ಟು ಮಟ್ಟಿಗೆ ನಿಖರವಾಗಿ ಲೆಕ್ಕಾಚಾರ ಮಾಡಲಾಯಿತು. ಆಗ ತಿಳಿದ ವಿಚಾರವೆಂದರೆ ಶಿಲಾ ಉಪಕರಣ ಮತ್ತು ಶಿಲಾಯುಧಗಳ ಕಾಲವು ನೂರಾರು ಸಾವಿರ ವರ್ಷಗಳ ಹಿಂದಿನ ಕಾಲವೆಂದೂ, ಉಪಕರಣಗಳ ವಿನ್ಯಾಸವೂ ಬಹಳ ನಿಧಾನವಾಗಿ ಬದಲಾಗುತ್ತಾ ಬಂದವು ಎಂಬುದು.

ಇದರ ಬಳಿಕ 1879ರಲ್ಲಿ ಸ್ಪೇನಿನ ಭೂಶಾಸ್ತ್ರಜ್ಞನಾದ ಮಾರ್ಸೆಲ್ಲಿನೋ ಡ ಸೌಲೋಹ್ಲಾ (ದಿ.1888)ರವರು ಹೊಸದಾಗಿ ಶೋಧಿಸಿದ ಗುಹೆಗಳಲ್ಲಿ ಉತ್ಖನನ ಮಾಡಿದರು. ಈ ಗುಹೆಗಳು ಪುರಾತನ ಕಾಲದಲ್ಲಿನ ಮಾನವರ ಕುರುಹುಗಳನ್ನು ಹುಡುಕಲು ಒಳ್ಳೆಯ ಸ್ಥಳವಾಗಿದ್ದಿತು. ಏಕೆಂದರೆ ಆದಿಮಾನವರು ಈ ಗುಹೆಗಳನ್ನು ಪ್ರಕೃತಿ ವೈಪರೀತ್ಯಗಳಿಂದ ರಕ್ಷಿಸಿಕೊಳ್ಳಲು ಆಶ್ರಯತಾಣಗಳಾಗಿ ಬಳಸುತ್ತಿದ್ದರು. ಈ ಕಾರಣಕ್ಕಾಗಿಯೇ ಈ ಆದಿಮಾನವರನ್ನು ಗುಹಾವಾಸಿಗಳೆಂದೂ ಕರೆಯುತ್ತಿದ್ದರು. ಈ ಗುಹೆಗಳಲ್ಲಿ ಅನೇಕ ವರ್ಷಗಳಿಂದ ತುಂಬಿದ್ದ ಧೂಳು ಮತ್ತು ಮಣ್ಣಿನಡಿಯಲ್ಲಿ ಆದಿಮಾನವರ ಉಪಕರಣಗಳು ದೊರಕಿದವು. ಮಾರ್ಸೆಲ್ಲಿನೋನ ಐದು ವರ್ಷದ ಮಗಳು ಉತ್ಖನನ ಮಾಡುತ್ತಿದ್ದಾಗ ಜೊತೆಗಿದ್ದಳು. ಕಂದು ಬೆಳಕಿನಲ್ಲಿ ಕೆಲಸ ನಡೆಯುತ್ತಿತ್ತು. ಆ ಚಿಕ್ಕ ಹುಡುಗಿ ತಲೆಯೆತ್ತಿ ನೋಡಿ 'ಅಪ್ಪ ಗೂಳಿಗಳು... ಅಲ್ಲಿ!' ಎಂದು ಕೈ ತೋರಿಸಿದಳು. ಆ ಗುಹೆಯ ಸೂರಿನಲ್ಲಿ ಚಿತ್ರಗಳನ್ನು ಬರೆದಿದ್ದನು.



ಇದೇ ಗುಹಾಚಿತ್ರಗಳ ಪ್ರಥಮ ಶೋಧ, ಹಲವಾರು ಕಡೆ ಈ ಬಗೆಯ ಚಿತ್ರಗಳೂ, ಬಣ್ಣ ಬಳಿದ ಆಕಾರಗಳೂ ದೊರಕಿವೆ. ಇದು ಆದಿಮಾನವರು ಕಲೆಯನ್ನು ಬಲ್ಲವರಾಗಿದ್ದರೆಂದು ಸಾಬೀತು ಪಡಿಸಿತು. ಇದು ಅವರ ಬುದ್ಧಿಮತ್ತೆಗೆ ಬೆಳಕು ಚೆಲ್ಲಿತು.



ಅಲ್ತಮೀರಾ ಗುಹೆಗಳಲ್ಲಿ ಆದಿಮಾನವರು ಬಿಡಿಸಿದ ಚಿತ್ರ. ಈ ಚಿತ್ರಗಳನ್ನು Sanz de Sautuola ಎಂಬಾತ ಅಲ್ಲೇ ಮರುಚಿತ್ರಿಸಿ ಕೊಂಡಿದ್ದಾನೆ. ಇಲ್ಲಿ ಅದರ ಒಂದು ಭಾಗ ಮಾತ್ರ ಇದೆ. ಚಿತ್ರಕೃಪೆ Human Ecology Kuchka, Anthropology Department-Institute of Ecology, University of Georgia, USA

### ನಿಯಾಂಡರ್‌ಥಾಲ್ ಮಾನವ

ಈ ಆದಿಮಾನವರು ಹೇಗಿದ್ದಿರಬಹುದು? ಆದಿ ಮಾನವರ ಪಳೆಯುಳಿಕೆಗಳೋ, ಮೂಳೆಗಳೋ ಸಿಕ್ಕಿದ್ದಾದರೆ ನಮಗೊಂದು ಚಿತ್ರ ಮೂಡಬಹುದು. ಪಳೆಯುಳಿಕೆಗಳು ಹೇಗಾಗುತ್ತವೆ? ಪ್ರಾಣಿಗಳು ನೀರಿನಲ್ಲಿ ಮುಳುಗಿ ಸತ್ತು ತಳ ಸೇರಿದಾಗ, ಅದಕ್ಕೆ ಗಾಳಿಯ ಸಂಪರ್ಕವಿಲ್ಲದೆ ಇತರ ಪ್ರಾಣಿಗಳ ಬಾಯಿಗೆ ಸಿಗದಂತಾಗುತ್ತದೆ. ಇದರ ಮೇಲೆ ಮಣ್ಣಿನ ಪದರಗಳು ಬಿದ್ದು ಕಾಲಾನಂತರದಲ್ಲಿ ಪದರ ಶಿಲೆಗಳಾಗುತ್ತವೆ. ಆಗ ಪ್ರಾಣಿಗಳ ಗಟ್ಟಿಯಾದ ಭಾಗಗಳಾದ ಹಲ್ಲು, ಮೂಳೆಗಳು ಪಳೆಯುಳಿಕೆಗಳಾಗುತ್ತವೆ. ಮಾನವರು ಬುದ್ಧಿಜೀವಿಗಳು, ಪ್ರಾಣಿಗಳಂತೆ ಈ ಬಗೆಯಲ್ಲಿ ಸಿಕ್ಕಿಹಾಕಿಕೊಳ್ಳುವುದಿಲ್ಲ. ಅದಕ್ಕಾಗಿಯೇ ಮಾನವರ ಪಳೆಯುಳಿಕೆಗಳು ವಿರಳ. ಆದರೂ ಕಡಿಮೆ ಸಂಖ್ಯೆಯಲ್ಲಾದರೂ ಮಾನವರ ಪಳೆಯುಳಿಕೆಗಳು ಸಿಕ್ಕಿವೆ.




ನಿಯಾಂಡಲ್ ಮಾನವ ಮತ್ತು ಆಧುನಿಕ ಮಾನವನ ನಡುವಿನ ತಲೆಬುರುಡೆಯ ಹೋಲಿಕೆ ವಿಭಿನ ಅಭಿವೃದ್ಧಿ ಹಂತಗಳಲ್ಲಿ

ದಕ್ಷಿಣ ಫ್ರಾನ್ಸ್‌ನಲ್ಲಿ ರೈಲು ರಸ್ತೆಗಾಗಿ ಭೂಮಿಯನ್ನು ಅಗೆಯುತ್ತಿದ್ದರು. ಇದು 1868ರಲ್ಲಿ, ಅಂದರೆ ಮೊದಲ ಗುಹಾಚಿತ್ರಗಳು ಸಿಕ್ಕ ಹನ್ನೊಂದು ವರ್ಷಗಳ ಮೊದಲು ಒಂದು ಗುಹೆಯೊಳಗೆ ರೈಲು ಹಾದಿ ಸಾಗಬೇಕಾಗಿತ್ತು. ಈ ಗುಹೆಯ ಹೆಸರು ಕ್ರೋಮ್ಯಾಗ್ನನ್. ಅಲ್ಲಿ ಐದು ಕಂಕಾಳ(Skeleton)ಗಳು ದೊರೆತವು. ಮಾಮ್ಮತ್ ಹಲ್ಲಿನ ಮೇಲೆ ಚಿತ್ರ ಶೋಧಿಸಿದ ವಿಜ್ಞಾನಿ ಲಾರ್ಟೆಂಟ್ ಈ ಗುಹೆಯನ್ನು ನೋಡಲು ಬಂದ. ಅಲ್ಲಿನ ಶಿಲೆಗಳನ್ನು ಧೀರ್ಘವಾಗಿ ಅಧ್ಯಯನ ಮಾಡಿದ. ಅವನ ಶೋಧನೆಯಂತೆ ಈ ಕಂಕಾಳಗಳು ಸುಮಾರು 35,000 ವರ್ಷಗಳಷ್ಟು ಹಳೆಯದೆಂದು ತಿಳಿಯಿತು.

ಅಂದರೆ ಆದಮ್ ಮತ್ತು ಈವ್ ಹುಟ್ಟುವ ಮೊದಲೇ ಈ ಕ್ರೋಮ್ಯಗ್ನನ್ ಆದಿಮಾನವರು ಹುಟ್ಟಿ, ಗುಹಾಚಿತ್ರಗಳನ್ನು ರಚಿಸಿದ್ದರೆಂದು ಜನರು ಮಾತನಾಡಿಕೊಳ್ಳತೊಡಗಿದರು. ಅಲ್ಲಿ ದೊರೆತ ಮಾನವರ ಕಂಕಾಳ(ಅಸ್ಥಿಪಂಜರ)ಗಳು ಆಧುನಿಕ ಮಾನವರ ಅಸ್ಥಿಗಳಂತೆಯೇ ಇದ್ದವು. ಇಂದಿನ ಮಾನವರಿಗಿಂತಲೂ ಎತ್ತರವೂ ಮತ್ತು ದೊಡ್ಡ ಮಿದುಳೂ ಇದ್ದವು.

ಇದಕ್ಕೂ ಹಿಂದೆ ಅಂದರೆ 1735ರಲ್ಲಿ ಕರೋಲಸ್ ಲಿನ್ನಿಯಾಸ್ (1707–1778) ಎಂಬುವನು ಸಸ್ಯಗಳು ಮತ್ತು ಪ್ರಾಣಿಗಳನ್ನು ಲ್ಯಾಟಿನ್ ಭಾಷೆಯ ದ್ವಂದ್ವನಾಮಗಳಿಂದ ನಿರ್ದೇಶಿಸಲು ಪ್ರಯತ್ನಿಸಿದ್ದನು. ಈ ಎರಡು ಹೆಸರುಗಳಲ್ಲಿ



ಮೊದಲನೆಯದು ವರ್ಗದ ಹೆಸರು (Genus), ಎರಡನೆಯದು ಜೀವ ಪ್ರಭೇದ (Species).

ಲಿನ್ನಿಯಾಕ್ ಮಾನವರನ್ನು ಹೋಮೋಸೇಪಿಯನ್ಸ್ (Homo sapiens) ಎಂದು ಕರೆದನು. ಹೋಮೋಸೇಪಿಯನ್ಸ್ ಎನ್ನುವ ಪ್ರಾಣಿ ವರ್ಗಕ್ಕೆ ಮಾನವ ಸೇರಿದ್ದಾನೆ. Homo ಎಂದರೆ ಲ್ಯಾಟಿನ್‌ನಲ್ಲಿ ಮಾನವ ಎಂದರ್ಥ. ಅದರಲ್ಲಿನ ಒಳಗುಂಪು Sapiens ಎಂದರೆ ಲ್ಯಾಟಿನ್ ಅರ್ಥ ಬುದ್ಧಿವಂತ ಪ್ರಾಣಿ. ಕ್ರೊಮ್ಯಾಗ್ನನ್ ಕಂಕಾಳಗಳು ಈಗಿನ ಮಾನವರಂತೆಯೇ ಇದ್ದವು. ಹಾಗಾಗಿ ಇವರೂ homo ವರ್ಗಕ್ಕೆ ಸೇರಿರಲೇಬೇಕು. ಹಾಗಿದ್ದರೆ ಬೈಬಲ್‌ನಲ್ಲಿ ಹೇಳಿದಂತೆ ಆಡಮ್ ಈವ್‌ರು 50,000 ವರ್ಷಗಳಿಗೂ ಹಿಂದೆ ಈಗಿನ ಮಾನವರಂತೆಯೇ ಹುಟ್ಟಿರಬೇಕು. 6000 ವರ್ಷಗಳ ಹಿಂದೆ ಅಲ್ಲ.

ಇವೆಲ್ಲ ಸಂಗತಿಗಳನ್ನು ಬದಿಗಿಟ್ಟು ಭಿನ್ನವಾಗಿ ಯೋಚಿಸಿದವನು ಚಾರ್ಲ್ಸ್ ರಾಬರ್ಟ್ ಡಾರ್ವಿನ್ (1809–1882) ಅವನಿಗೆ 24 ವರ್ಷ ವಯಸ್ಸಾಗಿದ್ದಾಗ ವೈಜ್ಞಾನಿಕ ಶೋಧಕ್ಕಾಗಿ ಐದು ವರ್ಷಗಳ ಯಾನ ಮಾಡಲಿದ್ದ ಹಡಗಿನಲ್ಲಿ ಕೆಲಸಕ್ಕೆ ಸೇರಿಕೊಂಡನು. ಇದು ಡಾರ್ವಿನ್ನನಿಗೆ ಜಗತ್ತಿನ ಮೂಲೆ ಮೂಲೆಗಳಲ್ಲಿನ ಪ್ರಾಣಿ, ಪಕ್ಷಿ, ಸಸ್ಯಗಳನ್ನು ಅಧ್ಯಯನ ಮಾಡುವ ಅವಕಾಶ ಒದಗಿಸಿತು. ದಕ್ಷಿಣ ಅಮೇರಿಕಾದ ತಟದಲ್ಲಿಯೇ ನಡೆದು ಹೋಗುವಾಗ ಜೀವ ಪ್ರಭೇದಗಳು ಸ್ವಲ್ಪ ಸಣ್ಣಪುಟ್ಟ ಬದಲಾವಣೆಗಳೊಂದಿಗೆ ಪಸರಿಸಿರುವುದನ್ನು ಡಾರ್ವಿನ್ ಕಂಡನು. ಗಾಲಪಗೋಸ್‌ನ ಜಂಟಿ ದ್ವೀಪಗಳಲ್ಲಿ ಫಿಂಚ್ ಹಕ್ಕಿಗಳ ಹದಿನಾಲ್ಕು ಪ್ರಭೇದಗಳಿದ್ದವು. ಈ ಬಗೆಯವು ಜಗತ್ತನಲ್ಲೆಲ್ಲೂ ಸಿಗುವುದಿಲ್ಲ. ಆದರೆ ದಕ್ಷಿಣ ಅಮೇರಿಕಾದ ಫಿಂಚ್‌ಗಳಿಗೂ ಇವಕ್ಕೂ ಸಾಮ್ಯಗಳಿದ್ದವು. ಇದು ಹೇಗಾಗಲು ಸಾಧ್ಯ? ಹೀಗೆ ಯೋಚಿಸತೊಡಗಿದ ಡಾರ್ವಿನ್ ಕಾಲ ಸರಿದಂತೆ ಜೀವಿಗಳು ಬದಲಾಗುತ್ತವೆಂಬ ತರ್ಕಕ್ಕೆ ಬಂದನು. ಬಹುಶ: ಹೊಸ ಬಗೆಯ ಜೀವಿಗಳು ಅಭಿವೃದ್ಧಿಗೊಳ್ಳಬಹುದು ಅಥವಾ ವಿಕಾಸಗೊಳ್ಳಬಹುದೆಂದು ಅವನಿಗೆ ಅನ್ನಿಸಿತು. ಅವನು ಈ ನಿಟ್ಟಿನಲ್ಲಿ ಪುರಾವೆಗಳನ್ನು ಕಲೆಹಾಕತೊಡಗಿದನು. ಅವನಿಗೆ ಈ ಜೀವವಿಕಾಸವಾದವು ಅನೇಕರಿಗೆ ಶಾಕ್ ನೀಡಬಲ್ಲುದೆಂದು ಮತ್ತು ಜೀವಸೃಷ್ಟಿ ಹೇಳುವ ಬೈಬಲ್‌ಗೆ ವಿರುದ್ಧವಾಗಿದೆಯೆಂದು ತಿಳಿದಿತ್ತು. ಈ ವಿಷಯ ಮೇಲೆ ಜೀವಿಗಳ ವಿಕಾಸ ಎಂಬ ಗ್ರಂಥವನ್ನು 1859ರಲ್ಲಿ ಪ್ರಕಟಿಸಿದನು. ಇದರ ಬಳಿಕ ಅನೇಕ ವರ್ಷಗಳವರೆಗೆ ಜೀವ ವಿಕಾಸದ ಬಗ್ಗೆ ವಾದ–ವಿವಾದ ನಡೆದವು. ನಿಧಾನವಾಗಿ ವಿಜ್ಞಾನಿಗಳು ಇದನ್ನು ನಂಬುತ್ತಾ ಬಂದರು.



ಡಾರ್ವಿನ್ ಕಂಡುಹಿಡಿದ ಫಿಂಚ್ ಹಕ್ಕಿಗಳಲ್ಲಿ ಕೊಕ್ಕಿನ ವೈವಿಧ್ಯ. ಚಿತ್ರ ಕೃಪೆ Peter Grant 1991

ಪ್ರಾಣಿಗಳು ಹಾಗೂ ಸಸ್ಯಗಳು ನಿಧಾನವಾಗಿ ವಿಕಾಸಗೊಂಡಿದ್ದರೆ, ಮಾನವರೂ ವಿಕಾಸಗೊಂಡಿರುವ ಸಾಧ್ಯತೆಗಳಿವೆ, ಅಲ್ಲವೇ? ಮಾನವರು, ಮಾನವರಲ್ಲದ ಜೀವಿಯೊಂದರಿಂದ ವಿಕಾಸಗೊಂಡಿದ್ದರೆ? ಅಥವಾ ಇನ್ನಾವುದಾದರೂ ಪ್ರಾಣಿಯಿಂದ ವಿಕಾಸಗೊಂಡಿದ್ದರೆ? ಈ ಅಂಶಗಳನ್ನು ಡಾರ್ವಿನ್ ತನ್ನ ಪುಸ್ತಕದಲ್ಲಿ ಚರ್ಚಿಸಲಿಲ್ಲ. ಆದರೆ ಇತರರು ಇವುಗಳನ್ನು ಚರ್ಚಿಸತೊಡಗಿದರು. 1863ರಲ್ಲಿ ಲೈಯೆಲ್ ಎಂಬುವರು ಇದೇ ತರ್ಕವನ್ನು ಮುಂದಿಟ್ಟುಕೊಂಡು ಪುಸ್ತಕ ಬರೆದರು. ಇದರ ಬಳಿಕ 1871ರಲ್ಲಿ ಡಾರ್ವಿನ್ ಮತ್ತೊಂದು ಪುಸ್ತಕ ಬರೆದು ಈ ವಿಷಯದ ಬಗ್ಗೆ ತನ್ನಲ್ಲಿದ್ದ ಪುರಾವೆಗಳನ್ನು ಪ್ರಕಟಿಸಿದರು.

ಮಾನವರ ಕಂಕಾಳವು ಆಫ್ರಿಕದ ಬಾಲವಿಲ್ಲದ ಮಂಗಗಳ, ಚಿಂಪಾಂಜಿಗಳ ಮತ್ತು ಗೊರಿಲ್ಲಗಳ ಕಂಕಾಳಗಳನ್ನು ಹೋಲುತ್ತದೆ. ಬಹುಶ: ಮಾನವರೂ



ಈ ಕಪಿಗಳೂ ಪೂರ್ವದ ಯಾವುದೋ ಒಂದು ಮೂಲ ಪ್ರಾಣಿಯಿಂದ ವಿಕಾಸಗೊಂಡಿರಬಹುದೇ? ಆ ಪೂರ್ವದ ಪ್ರಾಣಿಯು ಮಾನವ ಗುಣಗಳನ್ನೂ, ಕಪಿಗುಣಗಳನ್ನೂ ಒಟ್ಟಿಗೇ ಹೊಂದಿದ್ದಿರಬಹುದೇ? ಈ ವಿಚಾರಗಳು ಜನತೆಯನ್ನು ಭಯಭೀತಗೊಳಿಸಿದವು. ಬೈಬಲ್ಲಿನ ಭಕ್ತರಿಗೆ ಆದಮ್ ಮತ್ತು ಈವ್ ಕಪಿಯನ್ನು ಹೋಲುವ ಪೂರ್ವಜರಿಂದ ಬಂದವರು ಎಂದು ನಂಬಲಾಗಲಿಲ್ಲ.

ಡಾರ್ವಿನ್‌ನ ತರ್ಕ ಸರಿಯಿದ್ದರೆ, ಮಾನವ ಪೂರ್ವಜರ ಪಳೆಯುಳಿಕೆಗಳು ಸಿಗಬೇಕಲ್ಲ! ಕಪಿಗಳಿಗೂ ಮಾನವರಿಗೂ ಹೋಲುವ ಕಂಕಾಳಗಳು ಸಿಕ್ಕಿದರೆ ಮಾತ್ರ ಅದು ಎರಡೂ ಜೀವಿಗಳನ್ನು ಬೆಸೆಯುವ ಕೊಂಡಿಯಾಗಿರುತ್ತದೆ. ಡಾರ್ವಿನ್ನನ ಕಾಲದಲ್ಲಿ ಇಂತಹ ಪುರಾವೆ ಸಿಗಲಿಲ್ಲ. ಈ ಸಿಗದ ಪುರಾವೆಯನ್ನು "ಕೈಗೆಟುಕದ ಕೊಂಡಿ" (missing link) ಮಿಸ್ಸಿಂಗ್ ಲಿಂಕ್ ಎಂದು ಕರೆದರು. ಈ ಮಿಸ್ಸಿಂಗ್ ಲಿಂಕ್ ಸಿಗದೆ ಜನರು ಡಾರ್ವಿನ್ನನ ವಾದವನ್ನು ನಂಬದಾದರು. ಕ್ರೋಮ್ಯಾಗ್ನನ್ ಕಂಕಾಳಗಳು ಹಳೆಯದಾದರೂ ಮಾನವರಂತೆಯೇ ಇದ್ದವು. ಇವು ಮಿಸ್ಸಿಂಗ್ ಲಿಂಕ್ ಅಲ್ಲ. ಆದರೆ ಕ್ರೊಮ್ಯಾಗ್ನಮ್ ಕಂಕಾಳಗಳನ್ನು ಶೋಧಿಸುವ ಹನ್ನೊಂದು ವರ್ಷಗಳ ಮುನ್ನ ಮತ್ತು ಡಾರ್ವಿನ್ ತನ್ನ ಪುಸ್ತಕ ಪ್ರಕಟಿಸುವ ಮುನ್ನ ಕೆಲವು ಅಸ್ಥಿಗಳು ಸಿಕ್ಕಿದ್ದವು. ಪಶ್ಚಿಮ ಜರ್ಮನಿಯ ರೆನ್ ನದಿಯ ದಡದಲ್ಲಿ ನಿಯಾಂಡರ್‌ಥಾಲ್ ಎಂಬ ಕಣಿವೆ ಇದೆ. 1857ರಲ್ಲಿ ಈ ಕಣಿವೆಯಲ್ಲಿ ಅಗೆದಾಗ ಒಂದು ತಲೆಯೋಡಿನ ಭಾಗ, ಮತ್ತು ಕೈ-ಕಾಲುಗಳ ಅಸ್ಥಿಗಳು ಸಿಕ್ಕಿದ್ದವು. ಇವು ಮಾನವ ಅಸ್ಥಿಗಳಂತೆ ತೋರಿದರೂ, ಪೂರ್ಣವಾಗಿ ಮನುಷ್ಯರದ್ದಂತೆ ಇರಲಿಲ್ಲ. ತಲೆಯೋಡು ಹಿಂದಕ್ಕೆ ಸರಿದಿತ್ತು. ಹುಬ್ಬುಗಳು ಇರುವಲ್ಲಿ ಉಬ್ಬಿಕೊಂಡಿತ್ತು. ಹಲ್ಲುಗಳು ಮಾನವರ ಹಲ್ಲುಗಳಿಗಿಂತಲೂ ದೊಡ್ಡದಾಗಿದ್ದವು. ಕೆಳದವಡೆಯು ಮುಂದಕ್ಕೆ ಒತ್ತಿದ್ದಿತು. ಗಲ್ಲವು ಹಿಂದೆ ಸರಿದಿತ್ತು. ಇವೆಲ್ಲವೂ ಕಪಿಗಳ ಲಕ್ಷಣಗಳೇ, ಮಾನವರದ್ದಲ್ಲ. ವಿಜ್ಞಾನಿಗಳಿಗೆ ಇವು ವಿಶೇಷವಾಗಿ ಕಂಡರೂ ಅನೇಕರು ಇದರ ಬಗ್ಗೆ ಅಸಡ್ಡೆ ತೋರಿದರು. ಆದರೆ ಜರ್ಮನಿಯ ವೈದ್ಯರಾದ ಅಡೋಲ್ಫ್ ಫಿರಾಕ್ಯೂ (1821–1902) ಈ ಅಸ್ಥಿಗಳು ಮಾನವರದ್ದೇ ಎಂದೂ ಯಾವುದೋ ಮೂಳೆ ರೋಗವಿದ್ದಿರಬಹುದೆಂದೂ ಹೇಳಿದನು. ಇವನು ಡಾರ್ವಿನ್ನಿನ ವಾದವನ್ನು ನಂಬುತ್ತಿರಲಿಲ್ಲ. ಇದು ನಿಜವಿರಬಹುದೆಂದು ವಿಜ್ಞಾನಿಗಳು ನಂಬಿದರು. ಫ್ರೆಂಚ್ ವೈದ್ಯನಾದ ಪೀರಿ ಬ್ರೋಕಾ (1824–1880) ನಿಯಾಂಡರ್ ಅಸ್ಥಿಗಳಲ್ಲಿನ ತಲೆಯೋಡಿಗೆ ಯಾವುದೇ ರೋಗವಿದ್ದಿರಲಾರದು ಎಂದ. ಆ ತಲೆಯೋಡಿನಲ್ಲಿ ರೋಗದ ಯಾವ ಕುರುಹುಗಳೂ ಇಲ್ಲ ಎಂದ.



ಚಾರ್ಲ್ಸ್ ಡಾರ್ವಿನ್. ಈತ ನಾವಿಂದು ಆಧುನಿಕ ಜೀವಶಾಸ್ತ್ರವನ್ನು ಅರ್ಥಮಾಡಿಕೊಳ್ಳುವುದಕ್ಕೆ ದಾರಿ ಮಾಡಿಕೊಟ್ಟವನು. ಚಿತ್ರಕೃಪೆ Wikimedia Commons

ಹಲವಾರು ಕಡೆ ಇದೇ ಬಗೆಯ ಅಸ್ಥಿಗಳೂ, ತಲೆಯೋಡುಗಳೂ ದೊರೆತವು. ಎಲ್ಲಾ ಕಡೆಯೂ ಇದೇ ರೀತಿ ಹಿಂದೆ ಸರಿದ ಹಣೆ, ಗಲ್ಲ, ಮುಂಚಾಚಿದ ಹಲ್ಲು...



ಇತ್ಯಾದಿ. ಎಲ್ಲಾ ಕಡೆಯೂ ಒಂದೇ ರೋಗವಿರಲಾರದಷ್ಟೇ. ಹಾಗಾಗಿ ವೈದ್ಯನಾದ ಬ್ರೋಕಾ ಸರಿಯಾಗಿ ಹೇಳಿದ್ದ. ಫಿರ್‌ಕ್ಯೂನ ತಪ್ಪು ತಿಳಿಯಿತು. ಈಗ ವಿಜ್ಞಾನಿಗಳು ನಿಯಾಂಡರ್‌ಥಾಲ್ ಮಾನವ ಎಂದು ಗುರ್ತಿಸತೊಡಗಿದರು. ಈ ಮಾನವನಿಗೆ ಲ್ಯಾಟಿನ್ ಭಾಷೆಯ ಹೋಮೋ ನಿಯಾಂಡರ್ ಥಾಲೆನ್ಸಿಸ್ ಎಂದು ವೈಜ್ಞಾನಿಕ ಹೆಸರಿನ್ನಿಟ್ಟರು.

1911ರಲ್ಲಿ ಫ್ರೆಂಚ್ ಪಳೆಯುಳಿಕಾ ತಜ್ಞ ಪಿಯರಿಮಾರ್ಸೆಲ್ಲೈನ್ ಬೂಲ್(1861–1942)ನಿಗೆ ನಿಯಾಂಡರ್‌ಥಾಲ್ ಮಾನವನ ಪೂರ್ಣ ಕಂಕಾಳವೊಂದು ದೊರಕಿತು. ಇದರಿಂದ ನಿಯಾಂಡರ್‌ಥಾಲ್ ಮಾನವರು ಹೇಗಿದ್ದನೆಂದು ಚಿತ್ರಿಸಿಕೊಳ್ಳಲು ಸಾಧ್ಯವಾಯಿತು. ನಿಯಾಂಡರ್ ಮಾನವರು ಕ್ರೋಮ್ಯಾಗ್ನನ್ ಮಾನವರಿಗಿಂತ ಕುಳ್ಳರು. ಅವರ ಎತ್ತರ ಕೇವಲ ಐದು ಅಡಿಯಷ್ಟೇ! ಹೆಂಗಸರಂತೂ ಇನ್ನೂ ಕುಳ್ಳು. ಕೆಲವರು ಇವರನ್ನು 'ಮಂಗಮಾನವ'ರೆಂದು ಕರೆದರು. ಈ ರೀತಿಯಲ್ಲಿಯೇ ನಿಯಾಂಡರರ ಚಿತ್ರಗಳನ್ನು ಬರೆದರು. ಕ್ರೋಮ್ಯಾಗ್ನನ್ ಮಾನವನ ಚಿತ್ರ ಬರೆದಾಗ ಅಥವಾ ಅವನನ್ನು ತೋರಿಸಲು ಶಿಲ್ಪ ಕೆತ್ತಿದಾಗ ಮಾತ್ರ ಚೆನ್ನಾಗಿ ಗಲ್ಲ ಶೇವ್ ಮಾಡಿದ ವ್ಯಕ್ತಿಯ ಹಾಗೆ ಮತ್ತು ಅವನು ಗಹನವಾಗಿ ಯೋಚಿಸುತ್ತಿರುವಂತೆ ಚಿತ್ರಿಸುತ್ತಿದ್ದರು. ನಿಯಾಂಡರ್‌ಥಾಲ್ ಮಾನವನನ್ನು ಚಿತ್ರಿಸುವಾಗ ಅವನ ಗಲ್ಲ ಶೇವ್ ಮಾಡಿದಂತಿರುತ್ತಿರಲಿಲ್ಲ. ಇವನನ್ನು ಬಾಗಿದ ಬೆನ್ನಿನ, ವಿಕಾರ ವ್ಯಕ್ತಿಯಂತೆ ಮಾಡುತ್ತಿದ್ದರು.

ಈಗ ಇವೆಲ್ಲ ತಪ್ಪೆಂದು ಗೊತ್ತಾಗಿದೆ. ವಿಜ್ಞಾನಿ ಬೂಲ್ ಶೋಧಿಸಿದ ನಿಯಾಂಡರ್ ಮಾನವನು, ಮೊಣಕಾಲು ನೋವಿನಿಂದ ಬಳಲುತ್ತಿದ್ದ ವೃದ್ಧ, ಮಿಕ್ಕ ಕಂಕಾಳಗಳು, ನಿಯಾಂಡರರು ಈಗಿನ ಮಾನವರಂತೆಯೇ ಎದ್ದು ನಿಲ್ಲಬಲ್ಲವಾಗಿದ್ದರೆಂದು ತಿಳಿಯಿತು. ಇವನ ಮೆದುಳು ದೊಡ್ಡದಾಗಿದ್ದು ಇವರು ಪೂರ್ಣ ಮಾನವರೇ ಆಗಿದ್ದರು. ನಿಯಾಂಡರರ ಕಂಕಾಳಗಳು ಉತ್ತರ ಆಫ್ರಿಕ ಮತ್ತು ಏಷಿಯಾದಲ್ಲೂ ದೊರೆತವು. ಸುಮಾರು ನಲವತ್ತು ಪ್ರದೇಶಗಳಲ್ಲಿ ನೂರಕ್ಕೂ ಹೆಚ್ಚು ನಿಯಾಂಡರ್ ಮಾನವರ ಕಂಕಾಳಗಳು ಇದುವರೆಗೂ ದೊರೆತಿವೆ. ಇವುಗಳಲ್ಲಿ ಇತ್ತೀಚಿನವು ಕೇವಲ 30,000 ವರ್ಷಗಳಷ್ಟು ಹಳೆಯವಾಗಿವೆ. ಅಂದರೆ ಕ್ರೊಮ್ಯಾಗ್ನನ್ ಮತ್ತು ನಿಯಾಂಡರ್ ಮಾನವರು ಕನಿಷ್ಠ 20,000 ವರ್ಷಗಳ ಹಿಂದಿನವರೆಗೂ ಒಟ್ಟಿಗೆ ಜೀವಿಸಿದ್ದರು. ಕೆಲವು ಕಂಕಾಳಗಳು ಇವರಿಬ್ಬರಲ್ಲಿ ವೈವಾಹಿಕ ಸಂಬಂಧವಿದ್ದಿರಬಹುದೆಂದು ಗುಮಾನಿ ಹುಟ್ಟಿಸುತ್ತವೆ. ಇವೆಲ್ಲ ವಿಚಾರಗಳು ಬೆಳಕಿಗೆ ಬಂದ ಮೇಲೆ ವಿಜ್ಞಾನಿಗಳು ಹೋಮೋ ನಿಯಂಡರಾಥಾಲೆನ್ಸಿಸ್ ಪದನಾಮವನ್ನು ಕಿತ್ತೆಸೆದು ಹೋಮೋ ಸೇಪಿಯನ್ಸ್ ಪದನಾಮವನ್ನೇ ಉಪಯೋಗಿಸುತ್ತಿದ್ದಾರೆ.




ಕ್ರೊಮ್ಯಾಗ್ನನ್ ಮತ್ತು ನಿಯಾಂಡರ್ ತಾಲ್ ಮಾನವರ ತಲೆಬುರುಡೆಗಳ ಹೋಲಿಕೆ.
ಚಿತ್ರ ಕೃಪೆ/Wikimedia Commons

ಆದರೂ ನಿಯಾಂಡರರು ಮನುಕುಲದ ವಿಕಾಸದಲ್ಲಿ ಹಳಬರೇ ಸುಮಾರು ಲಕ್ಷ ವರ್ಷಗಳ ಹಿಂದೆಯೂ ನಿಯಾಂಡರರು ಬದುಕಿದ್ದ ಕುರುಹುಗಳಿವೆ. ಅಂದರೆ ಕ್ರೋಮ್ಯಾಗ್ನನ್ ಮಾನವನು ಉಗಮವಾಗುವ 10000 ವರ್ಷಗಳವರೆಗೆ ನಿಯಾಂಡರರು ಜೀವಿಸಿದ್ದರು ಅಥವಾ ಕ್ರೋಮ್ಯಾಗ್ನನ್ ಮಾನವ ನಿಯಾಂಡರ್‌ರವರಿಂದ ವಿಕಾಸಗೊಂಡನೇ? ಬಹುಶ: ಇಲ್ಲ. ಇವರಿಬ್ಬರಿಗೂ ಪೂರ್ವಿಕ ಜೀವಿಯೊಂದು ಇದ್ದಿರಬಹುದು.

### ಜಾವಾ ಮಾನವ ಮತ್ತು ಪೀಕಿಂಗ್ ಮಾನವ

ಒಂದಂತೂ ಸ್ಪಷ್ಟವಾಗಿತ್ತು, ನಿಯಾಂಡರ್ ಥಾಲ್ ಮಾನವನಂತೂ ಮಿಸ್ಸಿಂಗ್ ಲಿಂಕ್ ಅಲ್ಲ. ಅವನೂ ಬುದ್ಧಿವಂತ ಮಾನವನೇ. ಅವನನ್ನು ತಪ್ಪಾಗಿ 'ಕಪಿಮಾನವ' ಎಂದು ತಿಳಿದಿದ್ದರು. ಆದರೂ ಡಾರ್ವಿನ್ನಿನ ವಾದವನ್ನು ನಂಬುವವರು ಕಪಿಗಳಿಗೂ ಮಾನವರಿಗೂ ನಡುವಿನ ಮಿಸ್ಸಿಂಗ್ ಲಿಂಕ್ ಇರಲೇಬೇಕೆಂದು ನಂಬಿದ್ದರು. ಜರ್ಮನಿಯ ಸಸ್ಯಶಾಸ್ತ್ರಜ್ಞನಾದ ಅರ್ನ್ಸ್ ಹೆನ್ರಿಕ್ ಹೆಕ್ಕುಲ್‌ರವರು ಇಂತಹ ಮಿಸ್ಸಿಂಗ್ ಲಿಂಕ್‌ಗೆ ಪಿಥಕಾಂತ್ರೋಪಸ್ ಎಂಬ ವೈಜ್ಞಾನಿಕ ಹೆಸರನ್ನೂ ಸೂಚಿಸಿದ್ದರು. ಗ್ರೀಕ್ ಭಾಷೆಯಲ್ಲಿ ಕಪಿಮಾನವ ಎಂದರ್ಥ. ಇದು ಕಪಿಗಳಿಗೂ, ಮಾನವರಿಗೂ ನಡುವೆ ಇರುವ ಜೀವಿ ಎಂದು ಹೆಕ್ಕುಲ್‌ರವರ ನಂಬಿಕೆ.



ಹಾಲೆಂಡಿನ ವೈದ್ಯನಾದ ಯೂಜಿನ್ ಡೂಬ್ವಾ (1858–1941) ಈ ಪಿಥಕಾಂತ್ರೋಪಸ್‌ನ ಪಳೆಯುಳಿಕೆಯನ್ನು ಏನಾದರೂ ಮಾಡಿ ಹುಡುಕಿಯೇ ಬಿಡಬೇಕೆಂದು ಮನಸ್ಸು ಮಾಡಿದರು. ಇದನ್ನು ಹುಡುಕುವುದೆಲ್ಲಿ? ಮಾನವರನ್ನು ಹೋಲುವ ಕಪಿಗಳು ಇರುವಲ್ಲಿ ಹುಡುಕಬಹುದೆಂದು ಅವನಿಗನ್ನಿಸಿತು. ಆಫ್ರಿಕದಲ್ಲಿ ಚಿಂಪಾಂಜಿ, ಗೊರಿಲ್ಲಾಗಳೂ ಮತ್ತು ಒರಾಂಗುಟಾನ್ ಮತ್ತು ಗಿಬನ್‌ಗಳು ಇಂಡೋನೇಶಿಯಾ ಮತ್ತು ಏಷಿಯಾದ ಕಾಡುಗಳಲ್ಲಿಯೂ ಇದ್ದವು. ಪಿಥಕಾಂತ್ರೋಪಸ್ ಎಂದರೆ ಕಪಿಮಾನವ ತಾನೇ. ಹಾಗಾಗಿ ಅವರು ಈ ಕಪಿಗಳ ಪೂರ್ವಜರಾಗಿರಬೇಕು. ಅಂತೆಯೇ ಇದೇ ಕಾಡುಗಳಲ್ಲಿ ವಾಸಿಸುತ್ತಿದ್ದಿರಬೇಕು. ಆಗಿನ ಕಾಲದಲ್ಲಿ ಹೆಕ್ಕುಲ್‌ನು ಗಿಬನ್‌ಗಳು ಮಾನವರಿಗೆ ಬಹಳಷ್ಟು ಹೋಲುತ್ತವೆ ಎಂದಿದ್ದ. (ಇವನ ಹೇಳಿಕೆ ತಪ್ಪು. ಗಿಬನ್‌ಗಳು ಮಾನವರಿಗೆ ಬಲು ದೂರದ ಸಂಬಂಧಿಗಳು. ಆದರೆ ಡೂಬ್ವಾನಿಗೆ ಇದು ಗೊತ್ತಿರಲಿಲ್ಲ. ಆದ್ದರಿಂದ ಡೂಬ್ವಾ ಏಷಿಯಾದಲ್ಲಿ ಹುಡುಕಲು ಮೊದಲಿಟ್ಟ).

ಆಗಿನ ಕಾಲದಲ್ಲಿ ನೆದರ್‌ಲ್ಯಾಂಡಿನ ಆಡಳಿತದಲ್ಲಿ ಇಂಡೋನೇಷಿಯಾ ಮತ್ತಿತರ ದ್ವೀಪಗಳಿದ್ದವು. ಇವುಗಳಿಗೆ ಡಚ್ ಈಸ್ಟ್ ಇಂಡೀಸ್ ಎಂದು ಕರೆಯುತ್ತಿದ್ದರು. ಡೂಬ್ವಾ ಡಚ್ ದೇಶದವನಾದ್ದರಿಂದ ಈ ಪ್ರದೇಶಕ್ಕೆ ಹೋಗುವುದು ಸುಲಭ ಎಂದುಕೊಂಡನು. ಹಾಗೆಯೇ ಡಚ್ ಸೈನ್ಯ ದಳಕ್ಕೆ ಸೇರಿಕೊಂಡನು. (ಅವನ ಸ್ನೇಹಿತರಿಗೆ ಆಘಾತವಾಯಿತು). 1887ರಲ್ಲಿ ಡಚ್ ಸೈನ್ಯದಲ್ಲಿ ವೈದ್ಯಾಧಿಕಾರಿಯಾಗಿ ವರ್ಗಾವಣೆ ಮಾಡಿಸಿಕೊಂಡನು. ಅಲ್ಲಿಗೆ ತಲುಪಿದ ತಕ್ಷಣವೇ ಅನೇಕ ಗವಿ-ಗುಹೆಗಳಲ್ಲಿ ಅಗೆದು ಕಪಿಮಾನವರ ಅವಶೇಷಗಳಿಗಾಗಿ ಶೋಧಿಸತೊಡಗಿದರು. ಮೂರು ವರ್ಷಗಳವರೆಗೆ ಅವನ ಶೋಧಕಾರ್ಯವು ನಿರಂತರವಾಗಿ ನಡೆದಿತ್ತು. 1891ರಲ್ಲಿ ದಕ್ಷಿಣ ಜಾವಾ ದ್ವೀಪದಲ್ಲಿರುವ ತ್ರಿನಿಲ್ ಎಂಬ ಹಳ್ಳಿಯ ಬಳಿ ತಲೆಯೋಡಿನ ಚೂರುಗಳು ಹಾಗೂ ಕೆಲವು ಹಲ್ಲುಗಳ ಪುರಾತನ ಅವಶೇಷಗಳು ದೊರೆತವು. ಈ ತಲೆಯೋಡಿನಲ್ಲೂ ನಿಯಾಂಡರ್‌ಥಾಲ್ ಮಾನವನಿಗಿದ್ದಂತೆ ಹಣೆಯು ಹಿಂದೆ ಸರಿದಿತ್ತು. ಹುಬ್ಬುಗಳು ಉಬ್ಬಿದ್ದವು. ಆದರೆ ತಲೆಯೋಡು ಚಿಕ್ಕ ಗಾತ್ರದ್ದಾಗಿತ್ತು.

ಒಂದು ಸಾಧಾರಣ ಮಾನವನ ಮಿದುಳು ಮೂರು ಪೌಂಡು (1360 ಗ್ರಾಂ) ತೂಗುತ್ತದೆ. ಡೂಬ್ವಾನಿಗೆ ಸಿಕ್ಕ ತಲೆಯೋಡಿನೊಳಗೆ ಹೆಚ್ಚೆಂದರೆ ಎರಡು ಪೌಂಡ್ (900 ಗ್ರಾಂ) ಮಿದುಳು ತೂಗಬಹುದಾಗಿತ್ತಷ್ಟೇ. ಹಾಗೆಂದು ಸಿಕ್ಕ ತಲೆಯೋಡು ಚಿಕ್ಕ ವಯಸ್ಸಿನ ವ್ಯಕ್ತಿಯದೇನೂ ಆಗಿರಲಿಲ್ಲ. ಏಕೆಂದರೆ ಹುಬ್ಬುಗಳು ಎಷ್ಟು ಚೆನ್ನಾಗಿ ಉಬ್ಬಿದ್ದುವೆಂದರೆ ಅದು ದೊಡ್ಡ ವ್ಯಕ್ತಿಯದೆಂದು ಧಾರಾಳವಾಗಿ ಹೇಳಬಹುದಿತ್ತು. ಅದೂ ಅಲ್ಲದೆ ಜಾವಾ ತಲೆಯೋಡಿನ ಮಾನವನ ಮಿದುಳು ಗೊರಿಲ್ಲ ಮಿದುಳಿಗಿಂತಲೂ ದುಪ್ಪಟ್ಟು ಗಾತ್ರವಾಗಿತ್ತು. ಅಂದರೆ ಕಪಿ ಹಾಗೂ

ಮಾನವನ ಮಿದುಳುಗಳ ನಡುವೆ ಇದನ್ನು ಇಡಬಹುದಾಗಿತ್ತು. ಡೂಬ್ವಾನಿಗೆ ಇದೇ ಮಿಸ್ಸಿಂಗ್ ಲಿಂಕ್ ಇರಬಹುದೇ ಎಂದೆನಿಸಿ ಈ ಪಳೆಯುಳಿಕೆಗೆ ಪಿಥಕಾಂತ್ರೋಪಸ್ ಎರೆಕ್ಟಸ್ (ನೆಟ್ಟಗೆ ನಿಂತ ಕಪಿಮಾನವ) ಎಂದು ಹೆಸರಿಟ್ಟ. ಇದನ್ನೇ ಜಾವಾ ಮಾನವನೆಂದೂ ಹೆಸರಿಸುತ್ತಾರೆ.

1894ರಲ್ಲಿ ಡೂಬ್ವಾ ತನ್ನ ಸಂಶೋಧನೆಗಳನ್ನು ಪ್ರಕಟಿಸಿದ. ಮೂರನೇ ವರ್ಷ ತಾಯ್ನಾಡಿಗೆ (ನೆದರ್ ಲ್ಯಾಂಡ್) ಬಂದು ವಿವಾದಗಳ ಸುಳಿಯಲ್ಲಿ ಸಿಕ್ಕಿಕೊಂಡನು. ಇದು ಮಿಸ್ಸಿಂಗ್ ಲಿಂಕ್ ಜೀವಿಯ ಪಳೆಯುಳಿಕೆಯಾಗಿರಬಹುದು ಎಂದು ತಿಳಿದ ಡಾರ್ವಿನ್ ವಿರೋಧಿಗಳು, ಇದು ದೊಡ್ಡ ಕಪಿಯ ತಲೆಯೋಡು ಎಂದರು. ಮಿಕ್ಕವರು ಇದು ತಲೆ ಬೆಳೆಯದ ಮೊದ್ದು-ಮಾನವನದು ಎಂದರು. ಕೆಲವರು ತಲೆಯೋಡು ಬೇರೆ ಹಾಗೂ ಮಿಕ್ಕ ಮೂಳೆಗಳು ಬೇರೆ ಜೀವಿಯದು ಎಂದರು. ಡೂಬ್ವಾನಿಗೆ ತಲೆ ಚಿಟ್ಟು ಹಿಡಿಯಿತು ಹಾಗೇ ಬಹಳ ದುಃಖವೂ ಆಯಿತು. ಬೇಸರದಿಂದ ತನಗೆ ಸಿಕ್ಕ ಪಳೆಯುಳಿಕೆಗಳನ್ನು ಪೆಟ್ಟಿಗೆಯಲ್ಲಿ ಬೀಗ ಹಾಕಿ ಇಟ್ಟುಬಿಟ್ಟನು. ಹಲವಾರು ವರ್ಷಗಳ ಕಾಲ ಆ ಕಡೆ ತಿರುಗಿಯೂ ನೋಡಲಿಲ್ಲ.

ಈ ವಿವಾದವನ್ನು ಪರಿಹರಿಸುವುದು ಹೇಗೇ? ಇರುವುದೊಂದೇ ದಾರಿ- ಪಳೆಯುಳಿಕೆ ಸಿಕ್ಕ ಜಾವಾದ್ವೀಪಕ್ಕೆ ಮತ್ತೆ ಹೋಗಿ ಇನ್ನಷ್ಟು ಜಾವಾ ಮಾನವರ ಪಳೆಯುಳಿಕೆಗಳನ್ನು ಹುಡುಕುವುದು. ಈ ಕೆಲಸವನ್ನು ಜರ್ಮನಿಯ ವಿಜ್ಞಾನಿ ಗುಸ್ತಾವ್ ಫನ್ ಕೋನಿಗ್ಸ್ ಮಾಡಲು ಉತ್ಸುಕನಾಗಿ ತಯಾರಾದನು. 1930ರ ದಶಕದಲ್ಲಿ ಅವನು ಜಾವಾ ದ್ವೀಪಕ್ಕೆ ಹೋಗಿ ಹಲವು ವರ್ಷಗಳು ಶೋಧನೆ ಮಾಡಿದ. ಸ್ಥಳೀಯರು ಅವನಿಗೆ ಸಹಾಯ ಹಸ್ತ ಚಾಚಿದರು. ಅವರಿಗೆ ಏನನ್ನು ಹುಡುಕಬೇಕೆಂದು ಅವನು ನಿಖರವಾಗಿ ಸೂಚನೆಗಳನ್ನು ನೀಡಿದ. ಅವರು ಶೋಧಿಸಿ ತಂದ ಯಾವುದೇ ಚೂರುಪಾರು ಪಳೆಯುಳಿಕೆಗಳಿಗೂ ಹತ್ತು ಸೆಂಟಿನಂತೆ ಹಣ ನೀಡುವುದಾಗಿ ಹೇಳಿದ. ಕೆಲವು ಸ್ಥಳೀಯರು ಪಳೆಯುಳಿಕೆಗಳನ್ನು ಹುಡುಕಿ ತಂದರು. ಆದರೆ ಹೆಚ್ಚು ಹಣ ಪಡೆಯುವ ಆಸೆಯಿಂದ ಅವುಗಳನ್ನು ಸಣ್ಣಸಣ್ಣ ಚೂರು ಮಾಡಿ ತಂದರು. ಹಾಗಿದ್ದರೂ ಸಹ ಕೋನಿಗ್ಸ್‌ಗೆ ಮೂರು ತಲೆಯೋಡುಗಳು ಸಿಕ್ಕವು. ಕೆಲವು ದವಡೆಯ ಚೂರುಗಳೂ ದೊರಕಿದವು. ಅವುಗಳಲ್ಲಿ ಹಲ್ಲುಗಳೂ ಇದ್ದವು. ಮಿದುಳು ಬೆಳೆಯದ ಒಬ್ಬ ಜಾವಾ ಮಾನವನಿರಬಹುದು. ಆದರೆ ನಾಲ್ಕು ಮಂದಿ ಹೀಗೆಯೇ ಇರಲು ಸಾಧ್ಯವೇ? ಹಾಗಾಗಿ ಜಾವಾ ಮಾನವನೊಬ್ಬನಿದ್ದ. ಅವನು ಮಾನವರನ್ನು ಹೋಲುತ್ತಿದ್ದ. ಆದರೆ ಬುದ್ಧಿವಂತ ಮಾನವನಾಗಿರಲಿಲ್ಲ. ಹೋಮೋ ಸೇಪಿಯನ್ಸ್‌ಗಳನ್ನೂ, ಈ ಗುಂಪಿಗೆ ಸೇರದ ಕಪಿಮಾನವರನ್ನು ಒಟ್ಟಾಗಿ ಹೋಮಿನಿಡ್ಸ್ ಎಂದು ಗುಂಪು ಮಾಡುತ್ತಾರೆ. ಹೋಮೋಸೇಪಿಯನ್ ವರ್ಗಕ್ಕೆ ಸೇರದ ಮೊದಲ ಹೋಮಿನಿಡ್ಸ್ ಶೋಧವೆಂದರೆ ಜಾವಾ ಮಾನವ.



ಡೂಬ್ವಾನಿಗೆ ಎಂಭತ್ತು ವರ್ಷ ವಯಸ್ಸಾಗಿದ್ದಾಗ, ಕೋನಿಗ್ಸ್ ಮಾಡಿದ ಸಂಶೋಧನೆಗಳು ತಿಳಿದವು. ಅದಾಗಲೇ ಡೂಬ್ವಾನಿಗೆ ಅರಳು ಮರಳು ಆಗಿಬಿಟ್ಟಿತ್ತು. ತಾನು ಕಂಡುಹಿಡಿದ ತಲೆಯೋಡುಗಳು ಯಾವುದೋ ಕಪಿಯದಿರಬೇಕೆಂದು ಅವನೇ ಹೇಳತೊಡಗಿದ್ದ. ಕೋನಿಗ್ಸ್ ಅವನ ಬಳಿ ಹೋಗಿ, ಜಾವಾಮಾನವ 'ಹೋಮೀನಿಡ್' ಎಂದು ಸಾಬೀತಾಗಿದೆ ಎಂದು ಹೇಳಿದರೂ, ಆ ಮುದುಕ ನಂಬಲಿಲ್ಲ. ಕೆಲವು ಕಾಲದ ನಂತರ ಅವನು ವಿಧಿವಶನಾದ.

ಈ ನಡುವೆ ವಿಜ್ಞಾನಿಗಳ ದೃಷ್ಟಿ ಚೀನಾದ ಕಡೆ ತಿರುಗಿತು. ಚೀನಾದ ವೈದ್ಯರಲ್ಲಿ ಅತ್ಯಂತ ಹಳೆಯ ಪಳೆಯುಳಿಕೆಗಳ ಹಲ್ಲುಗಳನ್ನು ಪುಡಿಮಾಡಿ ಚಿಕಿತ್ಸೆಗಾಗಿ ಬಳಸುವ ಪದ್ಧತಿ ಇತ್ತು. ಹಾಗಾಗಿ ಅನೇಕ ಪಳೆಯುಳಿಕೆಗಳು ನಾಟಿ ವೈದ್ಯರ ಬಳಿ ದೊರಕುತ್ತಿದ್ದವು. 1900ರಲ್ಲಿ ವಿಜ್ಞಾನಿಗಳಿಗೆ ಇಂತಹವರ ಬಳಿ ಒಂದು ಹೊಮೋನಿಡ್ ಹಲ್ಲು ಸಿಕ್ಕಿತು. ಇಂತಹುದೇ ಹೋಮೋನಿಡ್‌ಗಳು ಚೀನಾದಲ್ಲಿ ಇದ್ದಿರಬಹುದೇ ಎಂಬ ಗುಮಾನಿ ಶುರುವಾಯಿತು. ಪೀಕಿಂಗ್‌ನ ವಾಯುವ್ಯ ದಿಕ್ಕಿನಲ್ಲಿ ಇಪ್ಪತ್ತೇಳು ಮೈಲಿಗಳಾಚೆ ಚೋಕೊತಿಯೆನ್ ಎಂಬ ಗ್ರಾಮವಿದೆ. ಇದರ ಬಳಿ ಅನೇಕ ಗುಹೆಗಳಿವೆ. ಈ ಗುಹೆಗಳಲ್ಲಿ ಮಣ್ಣು ತುಂಬಿ ಹೋಗಿದೆ. ಇಂತಹ ಸ್ಥಳದಲ್ಲಿ ಈ ಹೋಮೋನಿಡ್ ಅವಶೇಷಗಳು ಸಿಗುವ ಸಾಧ್ಯತೆಗಳಿದ್ದವು.

ಒಂದು ಗುಹೆಯಲ್ಲಿ ಬೆಣಚು ಕಲ್ಲುಗಳು ದೊರೆತವು. ಈ ಭೂಮಿಯಲ್ಲಿ ಬೆಣಚು ಕಲ್ಲು ಸೃಷ್ಟಿಯಾಗಲು ಸಾಧ್ಯವಿರಲಿಲ್ಲ. ಇದನ್ನು ಹೋಮೋನಿಡ್‌ಗಳು ಆಯುಧಗಳನ್ನು ಮಾಡಲು ತಂದಿರುವ ಸಾಧ್ಯತೆಯಿತ್ತು. ಹೀಗೆ ಯೋಚಿಸಿದ ಕೆನಡಾ ದೇಶದ ವಿಜ್ಞಾನಿ ಡೇವಿಡ್ಸನ್ ಬ್ಲಾಕ್ (1884-1834) ಆ ಗುಹೆಯನ್ನು ಶೋಧಿಸತೊಡಗಿದ. ಇಲ್ಲಿ 1923ರಲ್ಲಿ ಒಂದು ಹಲ್ಲು ದೊರೆಯಿತು. 1926ರಲ್ಲಿ ಮತ್ತೊಂದು 1927ರಲ್ಲಿ ಇನ್ನೊಂದು, ಇವನ್ನು ಕೂಲಂಕುಷವಾಗಿ ವಿಶ್ಲೇಷಣೆಗೆ ಒಳಪಡಿಸಲಾಯಿತು. ಇವು ಕಪಿಯ ಲಕ್ಷಣಗಳನ್ನು ಹೊಂದಿದ್ದವು. ಈ ಜೀವಿಗೆ 'ಸೈನಾಂತೋಪಸ್ ಪೀಕಿನೆನ್ಸಿಸ್' ಎಂಬ ಹೆಸರು ಕೊಟ್ಟರು. ಇದರ ಅರ್ಥ ಪೀಕಿಂಗ್‌ನ ಚೀನಿ ಮಾನವ/ಪೀಕಿಂಗ್ ಮಾನವ.

ಪೈ ಎಂಬ ಚೀನಿ ಪಳೆಯುಳಿಕಾ ತಜ್ಞನು 1929ರಲ್ಲಿ, ಬಾಗಿದ ಮೈಯ, ತಲೆಯೋಡಿನ ಚೂರನ್ನು ಪತ್ತೆಹಚ್ಚಿದನು. ಇದರ ಸುತ್ತಮುತ್ತ ಹಲ್ಲುಗಳು, ದವಡೆ ಮತ್ತು ತಲೆಯೋಡಿನ ಮಿಕ್ಕ ಚೂರುಗಳೂ ಕಾಣತೊಡಗಿದವು. ವಿಜ್ಞಾನಿ ಬ್ಲಾಕ್‌ನ ಮರಣಾನಂತರ (1934) ಶೋಧಕಾರ್ಯವು ಜರ್ಮನಿಯ ವಿಜ್ಞಾನಿ ಫ್ರಾನ್ಸ್‌ವೈಡೆನ್‌ರಿಖ್ (1873-1948)ರವರ ಮಾರ್ಗದರ್ಶನದಲ್ಲಿ ನಡೆಯಿತು. ಇದರ ಬಳಿಕ ಸುಮಾರು 40 ಹೋಮೋನಿಡ್‌ಗಳ ಅವಶೇಷಗಳು ದೊರೆತವು.

ಈ ಬಾರಿ ಯಾವ ಗೊಂದಲಕ್ಕೂ ಅವಕಾಶವಿಲ್ಲದಂತೆ, ಪೀಕಿಂಗ್ ಮಾನವನನ್ನು 'ಹೋಮೋ' ವರ್ಗಕ್ಕೆ ಸೇರಿಸಬಹುದೆಂದು ಎಲ್ಲರೂ ತೀರ್ಮಾನಿಸಿದರು. ದುರ್ದೈವವಶಾತ್ ಚೀನಾ ದೇಶದ ಈ ಭಾಗವನ್ನು 1937ರಲ್ಲಿ ಜಪಾನ್ ದೇಶವು ಆಕ್ರಮಿಸಿಕೊಂಡಿತ್ತು. ಆದರೂ ಇವರು ಶೋಧಕಾರ್ಯಕ್ಕೆ ಅಣಿಯಾಗಿತ್ತರು. 1941ರಲ್ಲಿ ಪರಿಸ್ಥಿತಿಯು ಬಿಗಡಾಯಿಸಿತು. ಜಪಾನ್-ಅಮೇರಿಕಗಳ ನಡುವೆ ಯುದ್ಧ ಶುರುವಾಯಿತು. ವಿಜ್ಞಾನಿಗಳು ಕೆಲಸ ನಿಲ್ಲಿಸಿ ತಾವು ಹೊರತೆಗೆದ ಪಳೆಯುಳಿಕೆಗಳನ್ನು ಅಮೇರಿಕ ದೇಶಕ್ಕೆ ಸಾಗಿಸಲು ಉದ್ಯುಕ್ತರಾದರು. ಯುದ್ಧದ ತೊಂದರೆಗಳಿಂದಾಗಿ ಡಿಸೆಂಬರ್ 5, 1941ರವರೆಗೂ ಇವರ ಸರಕು ನಾವೆಯೇರಲಿಲ್ಲ. ಎರಡು ದಿನಗಳ ನಂತರ ಜಪಾನ್ ಪರ್ಲ್‌ಹಾರ್ಬರ್‌ನ ಮೇಲೆ ದಾಳಿ ಮಾಡಿತು.

ಈ ಯುದ್ಧದ ಗೊಂದಲದಲ್ಲಿ ಏನಾಯಿತೆಂದು ಯಾರಿಗೂ ತಿಳಿಯಲಿಲ್ಲ. ಪೀಕಿಂಗ್ ಮಾನವನ ಪಳೆಯುಳಿಕೆಗಳು ಮಾಯವಾದವು. ಅವು ಯಾವನೋ ಪ್ರಾಣಿಶಾಸ್ತ್ರಜ್ಞನ ಬಳಿ ಹೋಗಿದ್ದಿರಬಹುದು!

ಈ ನಡುವೆ ಪೀಕಿಂಗ್ ಮಾನವನ ಮೂಳೆಗಳ ಬಗ್ಗೆ ಚೆನ್ನಾಗಿ ಅಧ್ಯಯನ ನಡೆದಿತ್ತು. ಇದರಿಂದ ಪೀಕಿಂಗ್ ಮಾನವನು, ಜಾವಾ ಮಾನವನಂತೆಯೇ ಕಪಿಮಾನವನಾಗಿದ್ದನೆಂದು ತಿಳಿಯಿತು. ಆದರೆ ಪೀಕಿಂಗ್ ಮಾನವನ ತಲೆಯೋಡು ದೊಡ್ಡದಾಗಿತ್ತು. ಈಗಲಂತೂ ವಿಜ್ಞಾನಿಗಳು ಇವೆರಡೂ ಜೀವಿಗಳನ್ನು ಭಿನ್ನವಾಗಿ ಗುರ್ತಿಸುವುದಿಲ್ಲ. ಅವು ನಿಯಾಂಡರ್‌ಥಾಲ್ ಮತ್ತು ಕ್ರೊಮ್ಯಾಗ್ನನ್ ಮಾನವರುಗಳಂತೆ ಒಂದೇ ಜೀವಿಯ ಪ್ರಭೇದಗಳೆಂದು ತಿಳಿಯುತ್ತಾರೆ. ಇವೆರಡೂ ಹೋಮೋಸೇಪಿಯನ್ ಅಲ್ಲವಾದರೂ ಇವರೆಲ್ಲರನ್ನೂ ಒಂದೇ ಹೋಮ್ ವರ್ಗಕ್ಕೆ ಸೇರಿಸಬಹುದು. ಆದ್ದರಿಂದ ಪಿಥಕಾಂತ್ರೋಪಸ್ ಸಿನಾಂತ್ರೋಪಸ್ ಪದಗಳನ್ನು ಕೈಬಿಟ್ಟು, ಜಾವಾ-ಮಾನವ ಮತ್ತು ಪೀಕಿಂಗ್-ಮಾನವ ಎಂಬ ಪದಗಳನ್ನೇ ಬಳಸುತ್ತಿದ್ದಾರೆ. ಇವರನ್ನು ಹೋಮೋ-ಎರಕ್ಟಸ್ ಶಾಖೆಗೆ ಸೇರಿಸುತ್ತಾರೆ.

ಎರಡನೇ ಮಹಾಯುದ್ಧವಾದ ಬಳಿಕ ಆಫ್ರಿಕದಲ್ಲಿ ಹೋಮೋ ಎರಕ್ಟಸ್‌ಗಳನ್ನು ಶೋಧಿಸಿ ತೆಗೆದರು. ಯೂರೋಪಿನಲ್ಲೂ ಸಹ ಇವು ಇರಬಹುದಾದ ಸಾಧ್ಯತೆಗಳಿವೆ. (ಆದರೆ ಯಾವುದೇ ಹೋಮೋನಿಡ್‌ಗಳು ಅಮೇರಿಕ ಖಂಡಗಳಿಗೂ, ಆಸ್ಟ್ರೇಲಿಯಾ ಖಂಡಕ್ಕೂ ಪ್ರವೇಶಿಸಿದ ಹಾಗೆ ಕಾಣುವುದಿಲ್ಲ.)

ಹೋಮೋ ಎರಕ್ಟಸ್‌ನ ಮಿದುಳು ಹೋಮೋಸೇಪಿಯನ್ಸ್‌ನ ಮಿದುಳಿನ ಮುಕ್ಕಾಲು ಭಾಗ ಮಾತ್ರ ಇದ್ದಿತು. ಆದರೆ ಮಾನವನ ತರಹ ಈ ಜೀವಿ ನಡೆದಾಡುತ್ತಿತ್ತು ಮತ್ತು ಉಪಕರಣಗಳನ್ನು ತಯಾರಿಸುತ್ತಿತ್ತು. ಚೋಕೋತಿಯನ್ ಗವಿಗಳಲ್ಲಿ ಬೆಂಕಿ ಉಪಯೋಗಿಸಿದ ಕುರುಹುಗಳಿವೆ. ಹೋಮೋ ಎರಕ್ಟಸ್ ಒಂದೂವರೆ ಕೋಟಿ



ವರ್ಷಗಳ ಹಿಂದೆ ಅಸ್ತಿತ್ವಕ್ಕೆ ಬಂದು, ಐದು ಲಕ್ಷ ವರ್ಷಗಳ ಹಿಂದೆ ನಶಿಸಿರಬೇಕು ಅಥವಾ ಎರೆಕ್ಟಸ್ ನಶಿಸದೆ, ಅದರ ಮಿದುಳು ವಿಕಾಸಗೊಂಡು ಹೋಮ್ ಸೇಪಿಯನ್‌ಗಳಾದುವೇ? ಇದು ತಾರ್ಕಿಕವಲ್ಲವೇ? ಆದರೆ ಒಬ್ಬ ಪಳೆಯುಳಿಕೆಗಳ ವಿಜ್ಞಾನಿ ಇದನ್ನು ಒಪ್ಪಲಿಲ್ಲ. ಅವನೇ ಲೂಯಿ ಎಸ್.ಬಿ. ಲೀಕಿ (1903–1972), ಬ್ರಿಟನ್ನಿನವನು.

ಪೂರ್ವ ಆಫ್ರಿಕದಲ್ಲಿ ಲೀಕಿಯ ತಂದೆ-ತಾಯಿಗಳು ಧರ್ಮ ಪ್ರಚಾರ ಕಾರ್ಯಕ್ಕಾಗಿ ಬಂದರು. ಲೂಯಿಲೀಕೀ ತನ್ನ ಬಾಲ್ಯವನ್ನು ಆಫ್ರಿಕದಲ್ಲೇ ಕಳೆದನು. ಅವನು ಕೇಂಬ್ರಿಡ್ಜ್‌ನಲ್ಲಿ ಓದಿದರೂ ಆಫ್ರಿಕಕ್ಕೆ ಮರಳಿದನು. ಅಲ್ಲೇ ತನ್ನ ಉಳಿದ ಜೀವನ ಸವೆಸಿದನು.

ಪೂರ್ವ ಆಫ್ರಿಕದ ಟಾಂಜಾನಿಯಾದಲ್ಲಿ ಒಲ್ಡುವೈ ಕಣಿವೆಯಿದೆ. ಈ ಜಾಗದಲ್ಲಿ ಲೀಕೀ ತನ್ನ ಶೋಧಕಾರ್ಯ ಶುರುಮಾಡಿದನು. ಇಲ್ಲಿನ ಪದರ ಶಿಲೆಗಳು ಎರಡು ಮಿಲಿಯನ್ ವರ್ಷಗಳ ಹಿಂದೆ ರೂಪುಗೊಂಡಿವೆ. ಈ ಪದರ ಶಿಲೆಗಳಲ್ಲಿ ಹೋಮೋನಿಡ್‌ಗಳು ಇರಬಹುದೆಂದು ಲೀಕೀ ಅನಿಸಿಕೆಯಾಗಿತ್ತು. ಇವನು 1960ರ ದಶಕದಲ್ಲಿ ಮೂರು ತಲೆಯೋಡುಗಳನ್ನು ಹುಡುಕಿ ತೆಗೆದನು. ಇವು ಹೋಮೋ ಎರಕ್ಟಸ್ ಆಗಿದ್ದಿರಬಹುದು. ಆದರೆ ಇವುಗಳ ಮೆದುಳು ಹೋಮ್ ಸೇಪಿಯನ್ಸ್‌ಗಳು ಅರ್ಧದಷ್ಟಿತ್ತು. ಇವರ ಮೂಳೆಗಳು ಇತರ ಹೋಮ್ ಎರಕ್ಟಸ್‌ಗಳಿಗಿಂತಲೂ ಮೃದುವಾಗಿದ್ದವು. ಇವುಗಳ ಕಾಲವು 1.8 ಮಿಲಿಯನ್ ವರ್ಷಗಳಿದ್ದಿರಬಹುದು. ಇವನ್ನು ಲೀಕೀ ಹೋಮೋ ಹ್ಯಾಬಿಲಿಸ್ ಅಂದರೆ "ಕುಶಲ ಮಾನವ" ಎಂದು ನಾಮಕರಣ ಮಾಡಿದ. ಏಕೆಂದರೆ ಈ ಪಳೆಯುಳಿಕೆಗಳ ಬಳಿ ಅನೇಕ ಶಿಲಾ ಉಪಕರಣಗಳು ಸಹಾ ಸಿಕ್ಕವು. ಎಷ್ಟೇ ಸಣ್ಣ ಮಿದುಳಿದ್ದರೂ ಈ ಜೀವಿಯು ಉಪಕರಣಗಳನ್ನು ಮಾಡಬಲ್ಲುದಾಗಿತ್ತು.

ಹೋಮ್ ವರ್ಗೀಕರಣದಲ್ಲಿ ಕೂರಿಸಬಹುದಾದ ಅತ್ಯಂತ ಪ್ರಾಚೀನ ಜೀವಿಯೆಂದರೆ ಹೋಮ್ ಹ್ಯಾಬಿಲಿಸ್ ಲೀಕೀಯವರು. ಹೋಮೋ ಹ್ಯಾಬಿಲಿಸ್ ಎರಡು ಭಿನ್ನ ದಾರಿಗಳಲ್ಲಿ ವಿಕಾಸಗೊಂಡಿರಬಹುದೆಂದು ಭಾವಿಸುತ್ತಾರೆ. ಒಂದೆಡೆ ಮಿದುಳು ಗಾತ್ರದಲ್ಲಿ ದೊಡ್ಡದಾಗುತ್ತಾ ಬಂದಿತು. ಇದರ ಜೊತೆಗೆ ಮೂಳೆಗಳು ಹಿಗ್ಗಿ ಬಲವಾಗುತ್ತ ವಿಕಾಸಗೊಂಡವು. ದೊಡ್ಡ ಬಲಿಷ್ಠ ತಲೆಯೋಡು, ಉಬ್ಬಿದ ಹಣೆ, ಹಲ್ಲುಗಳೂ ಮಾರ್ಪಾಡುಗೊಂಡವು. ಇನ್ನೊಂದೆಡೆ ಮಿದುಳು ಬೆಳೆದರೂ ತಲೆಯೋಡು ಮೃದುವಾಗಿಯೇ ಉಳಿಯಿತು. ಇದು ಹೋಮೋಸೇಪಿಯನ್ಸ್ ಆಯಿತು.


ಹೋಮೋ ಎರೆಕ್ಟಸ್ ನ ತಲೆಬುರುಡೆಯ ರೂಪ

ಅತಿ ಸರಳವಾಗಿ ಹೇಳಬೇಕಾದರೆ ಹೋಮೋಹ್ಯಾಬಿಲಸ್, ಹೋಮೋಎರೆಕ್ಟಸ್ ಆಗಿ ವಿಕಾಸಗೊಂಡಿತು. ಹೋಮ್‌ಎರೆಕ್ಟಸ್ ಹೋಮೋಸೇಪಿಯನ್ಸ್ ಆಗಿ ವಿಕಾಸಗೊಂಡಿತು. ಇದು ಮಿದುಳಿನ ಗಾತ್ರ ಕುರಿತಂತೆ ಊಹೆ. ಇನ್ನೂ ಹಲವಾರು ಹೋಮೋನಿಡ್‌ಗಳ ಕುರುಹುಗಳು ಸಿಕ್ಕಾಗ ಈ ಆಲೋಚನೆ ಸರಿಯೋ ತಪ್ಪೋ ಎಂದು ತಿಳಿದುಕೊಳ್ಳಬಹುದು.

**ಪುಟಾಣಿ ಕಪಿಮಾನವ**

ಇದುವರೆವಿಗೂ ನಾವು ಮೂರು ಹೋಮೋನಿಡ್‌ಗಳ ಬಗ್ಗೆ ವಿವರಿಸಿದ್ದೇವೆ. ಇವೆಲ್ಲವೂ ಹೋಮೋ ವರ್ಗಕ್ಕೆ ಸೇರಿದುವೇ. ಹೋಮೋ ಸೇಪಿಯನ್ಸ್ (ಅಂದರೆ ನಾವುಗಳು, ಕ್ರೊಮ್ಯಾಗ್ನನ್ ಮಾನವ, ನಿಯಾಂಡರ್‌ಥಾಲ್ ಮಾನವ) ಹೋಮೋ ಎರೆಕ್ಟಸ್ (ಪೀಕಿಂಗ್ ಮಾನವ ಮತ್ತು ಜಾವಾ ಮಾನವ) ಮತ್ತು ಹೋಮೋಹ್ಯಾಬಿಲಿಸ್.



ಹೋಮೋ ವರ್ಗಕ್ಕೆ ಸೇರದ ಹೊಮೋನಿಡ್‌ಗಳು ಇರಬಹುದೇ? ಆಧುನಿಕ ಮಾನವರನ್ನು ಹೋಲದ ಜೀವಿಗಳೂ ಇರಬಹುದೇ? ಇಂತಹ ಜೀವಿಯನ್ನು ಶೋಧಿಸಿದ ಕೀರ್ತಿ ಆಸ್ಟ್ರೇಲಿಯಾದ ವೈದ್ಯನಾದ ರೇಮಂಡ್ ಆರ್ಥರ್ ಡಾರ್ಟ್‌ನಿಗೆ (1893) ಸಲ್ಲಬೇಕು. ಇವನು ದಕ್ಷಿಣ ಆಫ್ರಿಕಾದ ವೈದ್ಯಕೀಯ ಕಾಲೇಜೊಂದರಲ್ಲಿ ಅನಾಟಮಿ ಶಿಕ್ಷಕನಾಗಿ ಕೆಲಸ ಮಾಡುತ್ತಿದ್ದನು.

ಅಲ್ಲಿ 1924ನೇ ಇಸವಿಯಲ್ಲಿ ಒಬ್ಬರ ಮನೆಯ ಕಿಟಕಿಯಲ್ಲಿ ಬಬೂನಿನ ತಲೆಯೋಡೊಂದನ್ನು ನೋಡಿದನು. ಅದು ಎಲ್ಲಿಂದ ಬಂದಿತೆಂದು ವಿಚಾರಿಸಿದನು. ಅದು ತಾಂಗ್ ಎಂಬಲ್ಲಿಂದ ಬಂದಿದ್ದಿತು. ಅಲ್ಲಿ ಅನೇಕ ಸುಣ್ಣಕಲ್ಲಿನ ಕಣಿವೆಗಳಿದ್ದವು. ಇವುಗಳಲ್ಲಿನ ಕೆಲವು ಚೂರುಗಳನ್ನು ಜೋಡಿಸಿದಾಗ ವಾನರ ಮುಖದಂತೆ ಕಾಣುತ್ತಿತ್ತು. ಆದರೆ ತಲೆಯೋಡು ಯಾವುದೇ ವಾನರಕ್ಕಿಂತಲೂ ದೊಡ್ಡದಾಗಿತ್ತು. ಹಣೆಯ ಉಬ್ಬು ಇರಲಿಲ್ಲ. ಆದರೂ ಮುಖವು ವಾನರದ್ದೆಂದು ಪೂರ್ಣವಾಗಿ ಹೇಳುವ ಹಾಗಿರಲಿಲ್ಲ.

ಡಾರ್ಟನು ಈ ಜೀವಿಗೆ ಆಸ್ಟ್ರಲೋಪಿಥಿಕಸ್ ಆಫ್ರಿಕಾನಸ್ (ಆಫ್ರಿಕಾದ ದಕ್ಷಿಣದ ವಾನರ) ಎಂದು ಹೆಸರಿಟ್ಟನು. 1925ರಲ್ಲಿ ಲೇಖನ ಬರೆದು ಇದು ವಾನರರು ಮತ್ತು ಮಾನವರ ನಡುವಿನ ಜೀವಿ ಆಗಿರಬಹುದೇ ಎಂಬ ಅಭಿಪ್ರಾಯ ಸೂಚಿಸಿದನು. ಆಗಿನ ಸಂದರ್ಭದಲ್ಲಿ ಡೂಬ್ವಾನ ವಿವಾದಗಳು ತಣ್ಣಗಾಗಿರಲಿಲ್ಲ. ಜಾವಾ ಮಾನವನ ಪಳೆಯುಳಿಕೆಗಳು ಪೆಟ್ಟಿಗೆಯಲ್ಲಿ ಭದ್ರವಾಗಿ ಮುಚ್ಚಿಡಲ್ಪಟ್ಟಿದ್ದವು. ಪೀಕಿಂಗ್ ಮಾನವನ ಒಂದು ಹಲ್ಲು ಮಾತ್ರ ಸಿಕ್ಕಿತ್ತು. ಡಾರ್ಟ್‌ನ ಅಭಿಪ್ರಾಯಕ್ಕೆ ಜಗತ್ತು ತಯಾರಿರಲಿಲ್ಲ. ಡಾರ್ಟ್‌ನ ಲೇಖನ ಓದಿದವರು ಈ ತಲೆಯೋಡು ಯಾವುದೋ ಕಪಿಯದ್ದಾಗಿರಬೇಕು ಎಂದು ಸುಮ್ಮನಾದರೇ ಹೊರತು, ಮಾನವರಿಗೆ ಹತ್ತಿರವಾದದ್ದೆಂದು ತಿಳಿಯಲಿಲ್ಲ. ಇದಾಗಿ ದಶಕವು ಉರುಳಿತು. ಯಾವ ಹೋಮೋನಿಡ್‌ಗಳೂ ದೊರಕಲಿಲ್ಲ.

ಡಾರ್ಟ್‌ನ ಅಭಿಪ್ರಾಯವನ್ನು ಬೆಂಬಲಿಸಿದ ಒಬ್ಬನೇ ವಿಜ್ಞಾನಿಯೆಂದರೆ ಸ್ಕಾಟ್‌ಲೆಂಡಿನ ಪಳೆಯುಳಿಕಾ ತಜ್ಞ ರಾಬರ್ಟ್ ಬ್ರೂಮ್ (1866–1951). ಇವನು 1934ರಲ್ಲಿ ದ.ಆಫ್ರಿಕಕ್ಕೆ ಬಂದು ಡಾರ್ಟ್ ಶೋಧಿಸಿದ ಜೀವಿಯ ಬಗ್ಗೆ ಇನ್ನಷ್ಟು ಹುಡುಕಲು ಶುರುಮಾಡಿದ. ಎರಡು ವರ್ಷಗಳ ಕಾಲ ಸುಣ್ಣಕಲ್ಲು ಗಣಿಗಳಲ್ಲಿ ಅಲೆದಾಡಿದ. ಒಂದೊಂದು ಬಾರಿ ಒಂದೊಂದು ಪಳೆಯುಳಿಕೆ ಕಾಣಸಿಗುತ್ತಿತ್ತು. ತೊಡೆಯ ಮೂಳೆಯು ಒಂದೆಡೆ ದೊರಕಿತು. ಶಾಲೆಯ ಪುಟ್ಟ ಹುಡುಗನೊಬ್ಬನಿಗೆ ಒಂದು ಪಳೆಯುಳಿಕೆ ಸಿಕ್ಕಿತು. ಇದನ್ನು ಅರಸಿಕೊಂಡು ಹೋದ ಬ್ರೂಮ್‌ನಿಗೆ ಒಂದು ದವಡೆಯೂ, ತಲೆಯೋಡಿನ ಚೂರೂ ಸಿಕ್ಕವು. ಈ ಹೊಸ ಜೀವಿಯು ಡಾರ್ಟನ್‌ನ

ಜೀವಿಗಿಂತಲೂ ಹಿರಿದಾಗಿದ್ದಿತು. ಬ್ರೂಮನು ಈ ಜೀವಿಗೆ ಪರಾಂತ್ರೋಪಸ್ ಅಂದರೆ 'ಮಾನವರೂಪಿ' ಎಂದು ಕರೆದನು. ಈ ವೇಳೆಗಾಗಲೇ ಜಾವಾ ಮಾನವ ಮತ್ತು ಪೀಕಿಂಗ್ ಮಾನವರ ಶೋಧವಾದುದ್ದರಿಂದ ಈ ಹೆಸರನ್ನು ವಿವಾದವಿಲ್ಲದೇ ಎಲ್ಲರೂ ಒಪ್ಪಿದರು.

ಎರಡನೇ ಮಹಾಯುದ್ಧವು ಈ ಎಲ್ಲ ಚಟುವಟಿಕೆಗಳಿಗೂ ತಡೆಯೊಡ್ಡಿತು. ಯುದ್ಧದ ನಂತರ ಬ್ರೂಮ್ ತನ್ನ ಶೋಧಕಾರ್ಯ ಮುಂದುವರೆಸಿ ಅನೇಕ ಪರಾಂತ್ರೋಪಸ್ ಮತ್ತು ಆಸ್ಟ್ರಲೋಪಿಥಕಸ್‌ಗಳು ಪಳೆಯುಳಿಕೆಗಳನ್ನು ಹುಡುಕಿ ತೆಗೆದನು. ಇವನ್ನು ಒಂದೇ ವರ್ಗಕ್ಕೆ ಸೇರಿಸಿದ್ದಾರೆ. ಆದರೆ ಹೋಮ್ ವರ್ಗಕ್ಕೆ ಅಲ್ಲ. ಹೋಮೋ ವರ್ಗಕ್ಕೆ ಸೇರದಿದ್ದರೂ ಪರಾಂತ್ರೋಪಸ್ ಮತ್ತು ಆಸ್ಟ್ರಲೋಪಿಥಕಸ್‌ಗಳು ಹೋಮೋನಿಡ್‌ಗಳೇ. ಇವುಗಳ ಹಲ್ಲುಗಳು ವಾನರದಂತಿದ್ದರೂ ಇವು ಮಾನವರಂತೆ ನೆಟ್ಟಗೆ ನಡೆಯುತ್ತಿದ್ದವು. ಇವುಗಳ ಗಾತ್ರ ಕಡಿಮೆ ಇದರ ಮೆದುಳು ಮಾನವರ ಮೆದುಳಿನಲ್ಲಿ ಅರ್ಧದಷ್ಟಿತ್ತು. ಅಸ್ಟ್ರಲೋಪಿಥಕಸ್ ಸುಮಾರು ನಾಲ್ಕಡಿ ಎತ್ತರವಿತ್ತು. ಇದರ ಮೆದುಳು ಈಗಿನ ಗೊರಿಲ್ಲದಷ್ಟೇ ಇತ್ತು.

ಆದರೂ ಆಸ್ಟ್ರಲೋಪಿಥಕಸ್‌ಗಳು ಉಪಕರಣಗಳನ್ನು ತಯಾರಿಸುತ್ತಿತ್ತು. ಈಗಿನ ಗೊರಿಲ್ಲಗಳಿಗೆ ಈ ಶಕ್ತಿಯಿಲ್ಲ. ಬಹುಶ: ಆಸ್ಟ್ರಲೋಪಿಥಕಸ್‌ನ ಮೆದುಳು ಅದರ ಚಿಕ್ಕ ಗಾತ್ರದ ಶರೀರಕ್ಕೆ ಹೋಲಿಸಿದರೆ ದೊಡ್ಡದೇನೋ? ಅಂದರೆ ಅದಕ್ಕೆ ಯೋಚಿಸಲು ಅವಕಾಶವಿದ್ದಿರಬೇಕು. ಏಕೆಂದರೆ ಸಣ್ಣ ಶರೀರವನ್ನು ನಿಯಂತ್ರಿಸಲು ಸಣ್ಣ ಮಿದುಳು ಸಾಕು. ಆಸ್ಟ್ರಲೋಪಿಥಕಸ್ ಈಗಿನ ಮಾನವರಿಗೆ ಪರಾಂತ್ರೋಪಸ್‌ಗಿಂತಲೂ ಹತ್ತಿರ. ಬಹುಶ: ಆಸ್ಟ್ರಲೋಪಿಥಕಸ್ ವಿಕಾಸಗೊಂಡು ಹೋಮೋಹ್ಯಾಬಿಲಿಸ್ ಆಗಿರಬೇಕು. ಪರಾಂತ್ರೋಪಸ್ ಈ ಬಗೆಯಾಗಿ ವಿಕಸನಗೊಳ್ಳದೇ ಅವಸಾನ ಹೊಂದಿರಬೇಕು.

ಆಸ್ಟ್ರಲೋಪಿಥಕಸ್ ಇದ್ದದ್ದು ನಾಲ್ಕು ಬಿಲಿಯನ್ ವರ್ಷಗಳ ಹಿಂದೆ. ಐದು ಲಕ್ಷ ವರ್ಷಗಳ ಹಿಂದಿನವರೆಗೂ ಅದು ಜೀವಿಸಿದ್ದಿತು. ಅಂದರೆ ಹೋಮೋಹ್ಯಾಬಿಲಿಸ್ ಮತ್ತು ಹೋಮೋ ಎರಕ್ಟಸ್‌ಗಳು ಜೀವಿಸಿದ್ದ ಕಾಲದವರೆಗೂ ಮಾನವನ ಪೂರ್ವಜನರನ್ನು ಹುಡುಕುವುದು ಸುಲಭ ಕೆಲಸವಾಗಿರಲಿಲ್ಲ. ಕೆಲವು ಖೊಟ್ಟಿ ಶೋಧನೆಗಳು ನಡೆದವು. ಉದಾಹರಣೆಗೆ 1935ರಲ್ಲಿ ಕೋನಿಗ್ಸ್‌ನು (ಇವನೇ ಜಾವಾಗೆ ಹೋಗಿ ಜಾವಾಮಾನವರ ಅನೇಕ ಕಂಕಾಳಗಳನ್ನು ಶೋಧಿಸಿದ್ದು) ಹಾಂಗ್‌ಕಾಂಗ್‌ನ ಔಷಧಿ ಮಳಿಗೆಗಳಲ್ಲಿ ನಾಲ್ಕು ದೊಡ್ಡ ದವಡೆ ಹಲ್ಲುಗಳನ್ನು ಪತ್ತೆ ಮಾಡಿದನು. ಇವು ಮಾನವನ ಹಲ್ಲುಗಳಂತಿದ್ದರೂ, ಬಹಳ ದೊಡ್ಡದಾಗಿದ್ದವು.

ಇದುವರೆವಿಗೂ ದೊರೆತ ಹೋಮೋನಿಡ್‌ಗಳು ಮಾನವರಿಗಿಂತ ಚಿಕ್ಕವು. ಹೋಮೋನಿಡ್‌ಗಳು ಬೃಹದಾಕಾರದಲ್ಲಿಯೂ ಇದ್ದಿರಬಹುದಲ್ಲವೇ. ಬೈಬಲ್ ಸಹ



ಅತಿಗಾತ್ರದ ಮಾನವರನ್ನು ಉದಾಹರಿಸುತ್ತದೆ. ಅಲ್ಲದೆ ಭೂಖಂಡದ ಎಲ್ಲ ಮಾನವ ಸಂಸ್ಕೃತಿಗಳಲ್ಲಿಯೂ ದೈತ್ಯಮಾನವರ ಪುರಾಣ ಕಥೆಗಳಿವೆ. ಈ ದೈತ್ಯಮಾನವರಿಗೆ ಅಷ್ಟೇನು ಬುದ್ಧಿ ಇಲ್ಲದಿರುವಂತೆ ಕಥೆ ಹೆಣೆಯಲಾಗುತ್ತದೆ. ಅವರ ದೇಹಕ್ಕೆ ಅನುಗುಣವಾಗಿ ಅವರ ಮೆದುಳು ಇರಲಿಲ್ಲವೋ ಎನ್ನುವಂತೆ.

ವಾನ್ ಕೋನಿಗ್ಸ್‌ವಾಲ್ಡಾನು ಈ ಬಗೆಯ ದೈತ್ಯ ಕಪಿಮಾನವನನ್ನು ಜೈಗೊಂಟೋಪಿತಕಸ್ ಎಂದು ಕರೆದನು. ಇಪ್ಪತ್ತು ವರ್ಷಗಳವರೆಗೆ ಜನರು ಯಾವುದಪ್ಪ ಈ ಜೈಗಾಂಟೋಪಿಥಕಸ್! ಎಂದು ಆಶ್ಚರ್ಯಪಡುತ್ತಿದ್ದರು. 1955ರಲ್ಲಿ ಚೀನಿ ಸರ್ಕಾರವು ತಮ್ಮಲ್ಲಿದ್ದ ಎಲ್ಲ ನಾಟಿ ಔಷಧಿ ಅಂಗಡಿಗಳನ್ನು ಶೋಧಿಸಿ ಜಾಲಾಡಿತು. ಅವರಿಗೆ ಈ ಜೀವಿಯ ಹಲವಾರು ದವಡೆಗಳೂ ಹಲ್ಲುಗಳೂ ಸಿಕ್ಕವು.

ಜೈಗಾಂಟೋಪಿಥಕಸ್ ಹೆಸರಿಗೆ ತಕ್ಕಂತೆ ದೈತ್ಯನೇ ಆಗಿತ್ತು. ಇದು ಹೋಮೋನಿಡ್ ಆಗಿರಲಿಲ್ಲ. ದೊಡ್ಡಗಾತ್ರದ ಕಪಿಯಾಗಿತ್ತು. ಇದು ಎದ್ದು ನಿಂತರೆ ಒಂಬತ್ತು ಅಡಿ ಎತ್ತರವಿರುತ್ತಿತ್ತು. ಹಲ್ಲುಗಳು ಮಾತ್ರ ಮನುಷ್ಯರಿಗಿದ್ದಂತೆ, ದವಡೆಯು ವಾನರಗಳಿಗಿದ್ದಂತಿತ್ತು. ಹೋಮೋಸೇಪಿಯನ್ನರ ಉಗಮದ ಕಾಲದಲ್ಲಿ ಜೈಗಾಂಟೋಪಿಥಕಸ್ ಇದ್ದಿರಬಹುದೊ ಏನೋ? ಆದರೂ ಜೈಗಾಂಟೋಪಿಥಕಸ್ ಅನೇಕ ಪುರಾಣ ಕಥೆಗಳಿಗೆ ಜನ್ಮ ನೀಡಿದೆ. ಜೈಗಾಂಟೋಪಿಥಕಸ್ ಕಪಿಯಾಗಿತ್ತು. ಕಪಿಮಾನವ ಅಲ್ಲ. ಇಂದಿನವರೆಗೂ ವಿಕಾಸಗೊಂಡ ಪ್ರಾಣಿಗಳಲ್ಲಿ 'ಹೋಮೋಸೇಪಿಯನ್ಸ್' ಮಾತ್ರವೇ ಅತಿದೊಡ್ಡ ಗಾತ್ರದ್ದಾಗಿದೆ.

ಜೈಗಾಂಟೋಪಿಥಕಸ್‌ಗಿಂತಲೂ ವಿವಾದದ ಸುಳಿಗೆ ಸಿಕ್ಕಿದ್ದು ಪಿಲ್ಟ್‌ಡೌನ್ ಮಾನವನ ಕಥೆ.

ಚಾರ್ಲ್ಸ್ ಡಾಸನ್ (1864–1916) ಎಂಬ ಇಂಗ್ಲೆಂಡಿನ ಲಾಯರ್‌ನಿಗೆ ಪಿಲ್ಟ್‌ಡೌನ್ ಎಂಬ ಸ್ಥಳದಲ್ಲಿ 1911ರಲ್ಲಿ ಕೆಳದವಡೆಯೂ ತಲೆಯೋಡೂ ದೊರಕಿದವು. ತಲೆಯೋಡು ಮಾನವರಿಗಿದ್ದಂತಯೇ ಇತ್ತು. ದವಡೆಯು ಕಪಿಯದ್ದಾಗಿತ್ತು. ಇದನ್ನು ಇಯೋಂತ್ರೋಪಸ್ ಎಂದು ಹೆಸರಿಸಿದರು. ಇದರ ಅರ್ಥ ಅರುಣೋದಯದ ಮಾನವ. ಆದರೆ ಪಿಲ್ಟ್ ಡೌನ್ ಮಾನವನೆಂದೇ ಎಲ್ಲರೂ ಕರೆಯತೊಡಗಿದರು.

ಪಳೆಯುಳಿಕಾತಜ್ಞರು 40 ವರ್ಷಗಳ ಕಾಲ ಈ ಬಗೆಯ ಜೀವಿಯನ್ನು ಯಾವ ಗುಂಪಿನಲ್ಲಿಡುವುದೆಂದು ಹೆಣಗಿದರು. ಉಳಿದೆಲ್ಲ ಪಳೆಯುಳಿಕೆಗಳಲ್ಲಿ ತಲೆಯೋಡು ಮಾನವರ ತಲೆಯನ್ನು ಹೋಲುತ್ತಿದ್ದರೆ, ದವಡೆಯೂ ಅದೇ ಪ್ರಮಾಣದಲ್ಲಿ ಹೋಗುತ್ತಿತ್ತು. ಆಧುನಿಕ ಮಾನವರಂತೆ ತಲೆಯೂ, ಕಪಿಯ ದವಡೆಯೂ ಇರಲು ಹೇಗೆ ಸಾಧ್ಯ?

1953ರಲ್ಲಿ ಸತ್ಯಾಂಶವು ಹೊರಬಿದ್ದಿತು. ಪಿಲ್ಟ್‌ಡೌನ್ ಮಾನವನ ಪಳೆಯುಳಿಕೆಯು ಖೊಟ್ಟಿಯೆಂದು ಸಾಬೀತಾಯಿತು. ಆಧುನಿಕ ಮಾನವರ ತಲೆಯೋಡೊಂದನ್ನು ರಾಸಾಯನಿಕವಾಗಿ ಹಳೆಯದಾಗಿ ಕಾಣುವಂತೆ ಮಾಡಿದ್ದರು. ದವಡೆಯನ್ನು ಅಲ್ಲಲ್ಲಿ ನುಣುಪುಗೊಳಿಸಿ ಜೋಡಿಸಿದ್ದರು. 1911ರಲ್ಲಿ ಪಳೆಯುಳಿಕಾ ತಜ್ಞರಿಗೆ ಹೋಮೋನಿಡ್‌ಗಳ ಬಗೆಗೆ ಅಷ್ಟೊಂದು ವಿಚಾರಗಳು ತಿಳಿದಿರಲಿಲ್ಲವಾದ್ದರಿಂದ ಅವರನ್ನು ಮೋಸಗೊಳಿಸಲು ಸಾಧ್ಯವಾಗಿತ್ತು.

**ಇದೆಲ್ಲ ವಿಕಾಸಗೊಂಡಿದ್ದು ಹೇಗೆ?**

ನಾವು ಇದುವರೆಗೂ ಯಾವ **"ಮಿಸ್ಸಿಂಗ್ ಲಿಂಕ್"** ಅನ್ನೂ ಹೆಸರಿಸಿಲ್ಲ. ಯಾವುದೇ ಕಪಿಗಿಂತಲೂ ಆಸ್ಟರಲೋಪಿಥಕಸ್ ಆಫ್ರಿಕಾನಸ್ ಹೋಮೋಸೇಪಿಯನ್ಸ್‌ಗೆ ಹತ್ತಿರವಾಗಿತ್ತು. ಪಿಲ್ಟ್‌ಡೌನ್ ಮಾನವ ಖೊಟ್ಟಿಯಾದರೆ, ಜೈಗಾಂಟೋಪಿಥಕಸ್ ಮಾನವನೇ ಅಲ್ಲ. ಚಿಂಪಾಂಜಿ ಮತ್ತು ಗೊರಿಲ್ಲಗಳ ಪೂರ್ವಿಕರು ಜೀವಿಸಿದ್ದಾಗಲೇ ಆಸ್ಟ್ರಲೋಪಿಥಕಸ್ ಕೂಡ ಜೀವಿಸಿದ್ದಿರಬೇಕು. ಇವೆಲ್ಲದರ ಪೂರ್ವದಲ್ಲಿ ಯಾವುದೋ ಜೀವಿಯಿದ್ದಿರಬೇಕು. ಅದರಿಂದ ಕಪಿಗಳೂ, ಮಾನವರೂ ಟಿಸಿಲೊಡೆದಂತೆ ವಿಕಾಸಗೊಂಡಿರಬೇಕೆಂದು ತರ್ಕಿಸಬಹುದು.

1934ರಲ್ಲಿ ಅಮೇರಿಕಾದ ವಿಜ್ಞಾನಿ ಜಿ. ಎಡ್‌ವರ್ಡ್ ಲೇವಿಸ್ ಭಾರತದ ಶಿವಾಲಿಕ್ ಪರ್ವತಗಳಲ್ಲಿ ಪಳೆಯುಳಿಕೆಗಳನ್ನು ಹುಡುಕುತಿದ್ದ. ಅವನಿಗೆ ದವಡೆಯ ಚೂರುಗಳೂ, ಕೆಲವು ಹಲ್ಲುಗಳೂ ದೊರೆತವು. ಅವು ದೊರೆತ ಶಿಲೆಗಳು ಆಸ್ಟರಲೋಪಿಥಕಸ್‌ಗಿಂತಲೂ ಹಳೆಯ ಕಾಲದವು. ಅಂದರೆ ಆ ಜೀವಿಯು ಕನಿಷ್ಠ ಏಳು ಮಿಲಿಯನ್ ಅಥವಾ ಹದಿನಾಲ್ಕು ಮಿಲಿಯನ್ ವರ್ಷಗಳ ಹಿಂದೆ ಇದ್ದಿರಬೇಕು. ಲೇವಿಸನು ಈ ಜೀವಿಗೆ ರಾಮಾಪಿಥಕಸ್ ಎಂದು ಹೆಸರಿಟ್ಟನು. ಅಂದರೆ **'ರಾಮನ ಕಪಿ'** ಎಂದರ್ಥ. ಈ ದೇಶದಲ್ಲಿ ರಾಮನೊಬ್ಬ ದೇವರು, ಅವನಿಗೆ ಕಪಿಸೈನ್ಯವೂ ಇದ್ದಿತು. ಅದಕ್ಕೇ ಈ ಹೆಸರು.

ಲೇವಿಸ್‌ನ ತರ್ಕದ ಪ್ರಕಾರ ಈ ರಾಮಾಪಿಥಕಸ್‌ನ ಹಲ್ಲುಗಳು ಬಹಳ ಚಿಕ್ಕವು. ಆದ್ದರಿಂದ ಆಹಾರ ತಿನ್ನಲು ತನ್ನ ಕೈಗಳನ್ನು ಬಳಸಲೇ ಬೇಕಿದ್ದಿರಬಹುದು. ಆದ್ದರಿಂದ ಇದನ್ನು ಹೋಮೋನಿಡ್ ವರ್ಗಕ್ಕೆ ಸೇರಿಸಬೇಕು. ಈ ಊಹೆಯನ್ನು ಮಿಕ್ಕ ವಿಜ್ಞಾನಿಗಳು ಅಂದಿನ ಕಾಲಕ್ಕೆ ಒಪ್ಪಿರಲಿಲ್ಲ. 1961 ಲೀಕೀ ಎಂಬ ವಿಜ್ಞಾನಿಯು ರಾಮಾಪಿಥಕಸ್‌ನ್ನು ಹೋಲುವ ಜೀವಿಯ ಪಳೆಯುಳಿಕೆಯನ್ನು ಕೀನ್ಯ ದೇಶದಲ್ಲಿ ಶೋಧಿಸಿದನು. ಹಲವಾರು ಹಲ್ಲುಗಳು ಮತ್ತು ದವಡೆಯ ಭಾಗಗಳು ಸಿಗಲಿಲ್ಲ. ಎಷ್ಟು ಹುಡುಕಿದರೂ ಕಂಕಾಳದ ಕೆಲವು ಭಾಗಗಳು ಸಿಗಲಿಲ್ಲ. ಈಗಿನವರೆಗಿನ ಎಲ್ಲ ಪುರಾವೆಗಳನ್ನು ಒಟ್ಟು ಮಾಡಿ ವಿಜ್ಞಾನಿಗಳು ಲೇವಿಸ್‌ನ ಊಹೆ ಸರಿ ಎನ್ನುತ್ತಾರೆ. ಇದುವರೆಗೆ ಸಿಕ್ಕ ಎಲ್ಲ ಪಳೆಯುಳಿಕೆಗಳಲ್ಲೂ ರಾಮಾಪಿಥಕಸ್ ಅತ್ಯಂತ



ಹಳೆಯದು. ಆಸ್ಟರಲೋಪಿಥಕಸ್‌ಗಿಂತಲೂ ಗಾತ್ರದಲ್ಲಿ ಚಿಕ್ಕದಾದರೂ ಈ ಜೀವಿಯು ದ್ವಿಪಾದಿಯಾಗಿ, ನೆಟ್ಟಗೆ ನಡೆದಾಡುತ್ತಿತ್ತು. ಬಹುಶ: ಇದೇ ಮೊದಲ ಹೋಮೋನಿಡ್ ಆಗಿದ್ದಿರಬಹುದು.

ಹಾಗಾದರೆ ಈಗಿನ ಕಪಿಗಳ ಪೂರ್ವಜರು ಯಾರು? ನಾನೀಗಾಗಲೇ ಜೈಗಾಂಟೋಪಿಥಕಸ್ ಅನ್ನು ಹೆಸರಿಸಿದ್ದೇನೆ. ಇದು ಕಪಿಯಾಗಿದ್ದರೂ ಎಲ್ಲ ಕಪಿಗಳು ವಿಕಸಿಸಿದ ಪೂರ್ವಕಪಿಯೇನಲ್ಲ. ನಾವು ಇನ್ನೂ ಹಿಂದಕ್ಕೆ ಹೋಗಬೇಕು. ವಿಕ್ಟೋರಿಯಾ ಸರೋವರದ ತೀರದಲ್ಲಿ ಲೂಯಿ ಲೀಕೀ ಮತ್ತು ಅವನ ಪತ್ನಿ ಮೇರಿ ಲೀಕೀಯವರಿಗೆ ಅಂತಹ ಪೂರ್ವಜ ಕಪಿಯ ಮೂಳೆಗಳು ದೊರೆತವು. ಈ ಜೀವಿಯ ದವಡೆಯೂ ಹಲ್ಲುಗಳೂ ಕಪಿಯವೇ ಆಗಿದ್ದವು. ಇದರ ಹೆಸರನ್ನು ಲೀಕೀ, ಲಂಡನ್‌ನಲ್ಲಿ ಅತೀ ಜನಪ್ರಿಯವಾಗಿದ್ದ ಚಿಂಪಾಂಜಿಯ ಗೌರವಸೂಚಕವಾಗಿ ಇಟ್ಟ. ಆ ಚಿಂಪಾಂಜಿಯ ಹೆಸರು ಕನ್ಸಲ್ ಈ ಪೂರ್ವಜ ಕಪಿಗೆ **"ಪ್ರೊಕನ್ಸಲ್"** ಎಂದು ಕರೆದ. ಇದರ ಅರ್ಥ ಕನ್ಸಲ್‌ನ ಪೂರ್ವಜ ಎಂದು. ಇದರ ಬಳಿಕ ಪ್ರೋಕನ್ಸಲ್‌ನ ಅನೇಕ ಮೂಳೆಗಳ ಚೂರುಗಳೂ ಸಿಕ್ಕಿದ್ದ ಇಡೀ ಕಂಕಾಳವನ್ನು ಜೋಡಿಸಲು ಸಾಧ್ಯವಾಯಿತು. ಈಗ ವಿಜ್ಞಾನಿಗಳಿಗೆ ಈ ಪೂರ್ವಕಪಿಯು ಯಾವ ಭಾಗದಲ್ಲಿ ಈಗಿನ ಕಪಿಗಿಂತಲೂ ಭಿನ್ನವೆಂದು ಅಧ್ಯಯನ ಮಾಡಲು ಅನುಕೂಲವಾಯಿತು. ಪ್ರೋಕನ್ಸಲ್ ಪೂರ್ವಕಪಿಯು ಡ್ರೈಯೋಪಿಥಕಸ್ (ಓಕ್ ಮರದ ಕಪಿ)ವರ್ಗಕ್ಕೆ ಸೇರಿಸಬಹುದಾದ ಜೀವಿಗಳ ಗುಂಪಿನಲ್ಲಿ ಸೇರುತ್ತದೆ. ಹಳೆಯ ಓಕ್ ಮರದ ಪಳೆಯುಳಿಕೆಗಳ ಜೊತೆಗೆ ಈ ಡ್ರೈಯೋಪಿಥಕಸ್‌ನ ಕುರುಹುಗಳು ಸಿಕ್ಕಿದ್ದರಿಂದ ಆ ಹೆಸರು.

ಈ ಡ್ರೈಯೋಪಿಥಕಸ್ ಮರದ ಮೇಲಿನ ಕಪಿ. ಬಹುಶ: ಎಂದೂ ದ್ವಿಪಾದಿಯಾಗಿರಲಿಲ್ಲ. ಡ್ರೈಯೋಪಿಥಕಸ್ ವರ್ಗಕ್ಕೆ ಸೇರಿದ ಜೀವಿಗಳ ಕುರುಹುಗಳನ್ನು 1856ರಷ್ಟು ಹಿಂದೆಯೇ ಫ್ರಾನ್ಸ್‌ನಲ್ಲೂ ಅನಂತರ ಆಫ್ರಿಕದ ಹಲವೆಡೆಗಳಲ್ಲೂ ಶೋಧಿಸಿ ತೆಗೆದರು. ಡ್ರೈಯೋಪಿಥಕಸ್ ವರ್ಗಕ್ಕೆ ಸೇರಿಸಬಹುದಾದ ಅನೇಕ ಜಾತಿಯ ಕಪಿಗಳಿದ್ದಿರಬಹುದು. ಕೆಲವು ಚಿಕ್ಕವು, ಕೆಲವು ಗೊರಿಲ್ಲ ಗಾತ್ರದವು. ಇವುಗಳು 25 ಮಿಲಿಯನ್ ವರ್ಷಗಳ ಹಿಂದೆ ಜೀವಿಸಿದ್ದಿರಬಹುದು. ಈಗಿನ ಚಿಂಪಾಂಜಿಗಳು, ಗೊರಿಲ್ಲಗಳ ಪೂರ್ವಜರು ಇದೇ ವರ್ಗಕ್ಕೆ ಸೇರಿದ್ದವು. ಈ ಜೀವಿಗಳೇ ವಿಕಾಸಗೊಂಡು ರಾಮಾಪಿಥಕಸ್ ಅದುವೇ ಎಂಬುದು ಯಕ್ಷಪ್ರಶ್ನೆಯಾಗಿದೆ. ಹಾಗೆಯೇ ಕಪಿಗಳು ಮತ್ತು ಮಾನವರ ನಡುವಿನ ಮಿಸ್ಸಿಂಗ್ ಲಿಂಕ್ ಯಾವುದಿರಬಹುದು ತಿಳಿದಿಲ್ಲ.

ರಾಮಾಪಿಥಕಸ್‌ನ ಕಂಕಾಳದ ಭಾಗಗಳು ಸಿಕ್ಕರೆ, ಈ ಸಮಸ್ಯೆಯ ಪರಿಹಾರವಾಗಬಹುದು.

ಈಜಿಪ್ಟ್‌ನಲ್ಲಿ ಸುಮಾರು ನಲವತ್ತು ಮಿಲಿಯನ್ ವರ್ಷಗಳ ಹಿಂದಿನ ಕಪಿಯ ಪಳೆಯುಳಿಕೆ ಸಿಕ್ಕಿದೆ. ಇದನ್ನು ಈಜಿಪ್ಟೋಪಿಥಕಸ್ (ಈಜಿಪ್ಟ್‌ನ ಕಪಿ) ಎಂದು ಕರೆದಿದ್ದಾರೆ. ಡ್ರೈಯೋಪಿಥಕಸ್ ಈಗಿನ ಕಪಿಗಳ ಪೂರ್ವಜನಲ್ಲದಿದ್ದರೆ ಈಜಿಪ್ಟೋಪಿಥಕಸ್ ಆಗಿದ್ದಿರಬಹುದೇ? ಈ ಹಂತದಲ್ಲಿ ನಮಗೆ ಸಿಕ್ಕ ಪುರಾವೆಗಳ ಕಥೆ ಈಗ ನಿಂತಿದೆ. ಹಾಗಾದರೆ ಒಟ್ಟಾರೆ ಸೇರಿಸಿ ಮಾನವರ ವಿಕಾಸದ ಕಥೆಯ ಸಾರಾಂಶವನ್ನು ಹೀಗೆ ಹೇಳಬಹುದು:

70 ಮಿಲಿಯನ್ ವರ್ಷಗಳ ಹಿಂದೆ ಡಿನೋಸಾರ್‌ಗಳು ನಿರ್ವಂಶಗೊಂಡಾಗಲೇ ಕಪಿಗಳಂತಹ ಜೀವಿಗಳು, ಈಗಿನ ಲೀಮರ್ ಕಪಿಗಳಂತೆ ವಿಕಾಸಗೊಂಡಿದ್ದವು. ಆಫ್ರಿಕ ಖಂಡದಲ್ಲಿ 40 ಮಿಲಿಯನ್ ವರ್ಷಗಳ ಪೂರ್ವದಲ್ಲೇ ಬಾಲವಿಲ್ಲದ ಕಪಿಗಳು ಇದ್ದವು. ಇವುಗಳಿಗೆ ದೊಡ್ಡ ಮಿದುಳೂ, ವಿವಿಧ ಕೆಲಸಗಳಿಗೆ ಅನುವಾಗುವ ಕೈಗಳೂ ಇದ್ದವು. ಇದನ್ನು ಈಜಿಪ್ಟೋಪಿಥಕಸ್ ಹೇಳುತ್ತದೆ.

ಕಾಲ ಸರಿದಂತೆ ಇವೇ ಕಪಿಗಳು ಖಂಡಾಂತರವಾಗಿ ವಲಸೆ ಹೋಗಿ ಈಗಿನ ದಕ್ಷಿಣ ಏಷಿಯಾದ ಗಿಬನ್ ಮತ್ತು ಒರಾಂಗುಟಾನ್‌ಗಳಾಗಿ ವಿಕಾಸಗೊಂಡಿರಬೇಕು. ಡ್ರೈಯೋಪಿಥಕಸ್ ವರ್ಗದ ಕಪಿಗಳು ಹೆಚ್ಚು ಗಾತ್ರದ ಮೆದುಳನ್ನು ಬಲವಾದ ಮೂಳೆಗಳನ್ನು ಬೆಳಸುವತ್ತ ವಿಕಾಸಗೊಳ್ಳತೊಡಗಿದವು. ಇವೇ ಚಿಂಪಾಂಜಿ ಮತ್ತು ಗೊರಿಲ್ಲಗಳ ವಿಕಾಸಕ್ಕೆ ಕಾರಣವಾಗಿರಬೇಕು.

ಇದೇ ಡ್ರೈಯೋಪಿಥಕಸ್‌ನ ಇನ್ನೊಂದು ಟಿಸಿಲು ಇಪ್ಪತ್ತು ಮಿಲಿಯನ್ ವರ್ಷಗಳ ಹಿಂದೆ ಭಿನ್ನದಾರಿಯಲ್ಲಿ ವಿಕಾಸಗೊಂಡಿತು. ಸಣ್ಣ ಗಾತ್ರದ ದವಡೆ, ತೆಳುವಾದ ಮೂಳೆಗಳು, ಚಿಕ್ಕ ಹಲ್ಲುಗಳುಳ್ಳ ಜೀವಿಗಳು ಉಗಮಗೊಂಡವು. ಹಲ್ಲುಗಳು ಚಿಕ್ಕವಾದ್ದರಿಂದ, ಇವು ಆಹಾರ ತಿನ್ನಲು ಕೈಗಳನ್ನೇ ಹೆಚ್ಚಾಗಿ ಬಳಸಬೇಕಾಗಿತ್ತು.

ಹವಾಮಾನ ಬಿಸಿಯಾಗಿ, ಹವಾಮಾನ ವೈಪರೀತ್ಯಗಳಿಂದ ಕಾಡು ನಾಶವಾಗಿ ಮರಗಳಿಂದ ಈ ಕಪಿಗಳು ಧರೆಗೆ ಇಳಿದವು. ಇವುಗಳ ಪೃಷ್ಠಭಾಗದ ಮೂಳೆಗಳು ವಿಕಾಸವಾಗತೊಡಗಿದವು. ಇವುಗಳು ಹುಲ್ಲುಗಾವಲುಗಳಲ್ಲಿ ನೇರವಾಗಿ ನಿಂತು ಓಡಾಡುವಂತಾಯಿತು. ಅವುಗಳ ಕೈಗಳು ಮುಕ್ತವಾಗಿ ಎಲ್ಲ ಸಂದರ್ಭಗಳಲ್ಲೂ ಬಳಸುವಂತಾಯ್ತು. ತಮ್ಮ ಕೈಗಳಿಂದ ಎತ್ತುವುದು, ಹೊರುವುದು, ಬೆರಳು ತೋರಿಸಿ ಹುಡುಕುವುದು, ಅಂಗೈಯಿಂದ ಸಂವೇದನೆಗಳನ್ನು ಪಡೆಯುವುದು ಸಾಧ್ಯವಾದ್ದರಿಂದ ಇವುಗಳ ಮೆದುಳಿಗೆ ಉತ್ತೇಜನ ಸಿಕ್ಕಿ, ಅದು ದೊಡ್ಡಗಾತ್ರಕ್ಕೆ ವಿಕಾಸಗೊಳ್ಳತೊಡಗಿತು.

ಕೈಗಳನ್ನು ಬಳಸುವ, ನೇರವಾಗಿ ನಡೆದಾಡಬಲ್ಲ ಜೀವಿಗಳೇ ಹೋಮೋನಿಡ್‌ಗಳು. ಇವುಗಳು ವಿಕಾಸಗೊಂಡಿದ್ದು ಇಪ್ಪತ್ತು ಮಿಲಿಯನ್



ವರ್ಷಗಳ ಹಿಂದೆ. ಪೂರ್ವ ಆಫ್ರಿಕದಲ್ಲಿ ಉಗಮಗೊಂಡ ಮೊದಲ ಹೋಮೋನಿಡ್ ರಾಮಾಪಿಥಕಸ್ ಎಂಬು ಕುರುಹು ನಮಗೆ ಸಿಕ್ಕಿದೆ. ಇದು ಏಷಿಯಾವರೆಗೂ ವಲಸೆ ಹೋಗಿದ್ದಿತು. ಇದು ಬಹುಶ: ಹತ್ತು ಮಿಲಿಯನ್ ವರ್ಷಗಳ ಹಿಂದೆ.

ರಾಮಾಪಿಥಕಸ್ ಆಫ್ರಿಕದಲ್ಲಿ ವಿಕಾಸದ ದಾಪುಗಾಲಿಟ್ಟಿತು. ನಾಲ್ಕು ಮಿಲಿಯನ್ ವರ್ಷಗಳ ಹಿಂದೆ ಆಸ್ಟ್ರಲೋಪಿಥಕಸ್ ವಿಕಾಸಗೊಂಡಿತು. ಮಿದುಳು ಮತ್ತು ಶರೀರ ದೊಡ್ಡದಾಗುವ ವಿಕಾಸದ ಹಾದಿ ಮುಂದುವರೆಯಿತು. ಹೋಮ್ ವರ್ಗಕ್ಕೆ ಸೇರಿಸಬಹುದಾದ ಹೋಮೋನಿಡ್‌ಗಳು ಎರಡು ಮಿಲಿಯನ್ ವರ್ಷಗಳ ಹಿಂದೆ ಅಸ್ಥಿತ್ವಕ್ಕೆ ಬಂದವು. ಹೀಗೆ ಹೋಮೋಹ್ಯಾಬಿಲಿಸ್ ಬಂದಿದೆ. ಈ ಹಂತದಲ್ಲಿ ಹೋಮೋನಿಡ್‌ಗಳ ಮಿದುಳು ಹಿಂದಿನ ಯಾವುದೇ ಕಪಿಯ ಮಿದುಳಿಗಿಂತಲೂ ದೊಡ್ಡದಾಗಿತ್ತು. ಆದರೂ ಆಧುನಿಕ ಮಾನವನಿಗಿಂತಲೂ ಚಿಕ್ಕದೇ ಆಗಿತ್ತು.

ಒಂದೂವರೆ ಮಿಲಿಯನ್ ವರ್ಷಗಳ ಹಿಂದೆ ಹೋಮೋ ಎರೆಕ್ಟಸ್‌ನ ವಿಕಾಸವಾಯಿತು. ಏಶಿಯಾ, ಇಂಡೋನೇಶಿಯಾ, ಚೀನಾಗಳವರೆಗೂ ವಲಸೆ ಹೋದ ಜೀವಿ ಇದೇ. ಇದರದ್ದೇ ಪಳೆಯುಳಿಕೆಗಳು ಜಾವಾ ಮಾನವ ಪೀಕಿಂಗ್ ಮಾನವ ಆಗಿವೆ.




ಆದಿಮಾನವನಿಂದ ಆಧುನಿಕ ಮಾನವನಾಗುವ ದಾರಿಯಲ್ಲಿ ಮಾನವನ ಮೆದುಳಿನ ಗಾತ್ರದಲ್ಲಿ ಆದ ವಿಕಾಸ. ಚಿತ್ರ ಕೃಪೆ J.BioAnal. BioMed 2017

ಮಿದುಳು ಹಿರಿದಾಗುತ್ತಾ ವಿಕಾಸಗೊಂಡ ಹೋಮ್ ಎರಕ್ಟಸ್ ಬೆಂಕಿಯ ಉಪಯೋಗವನ್ನು ಕಂಡುಕೊಂಡಿತು. ಸುಮಾರು 1,50,000 ವರ್ಷಗಳ ಹಿಂದೆ ಮಿದುಳು ದೊಡ್ಡದಾಗಿದ್ದ ಜೀವಿಯನ್ನು ಹೋಮೋಸೇಪಿಯನ್ಸ್ ವರ್ಗಕ್ಕೆ ಸೇರಿಸಬಹುದಾಗಿದ್ದಿತು. ಹೋಮೋಸೇಪಿಯನ್‌ನ ಅತ್ಯಂತ ಹಳೆಯ ಉದಾಹರಣೆಯೆಂದರೆ ನಿಯಾಂಡರ್‌ಥಾಲ್ ಮಾನವರು. ಇದಾದ ಬಳಿಕ ವಿಕಾಸದ ಹಾದಿಯಲ್ಲಿ ಐವತ್ತು ಸಾವಿರ ವರ್ಷಗಳ ಹಿಂದೆ ಕ್ರೋಮ್ಯಾಗ್ನನ್ ಮಾನವ ಬಂದನು. ಇದಾದ ಬಳಿಕ ಉಂಟಾದ ವಿಕಾಸವು ಅತಿವೇಗದ್ದು. ಹತ್ತು ಸಾವಿರ ವರ್ಷಗಳ ಹಿಂದೆ ಹೋಮೋಸೇಪಿಯನ್ನರು ಬೇಸಾಯ ಮಾಡುವುದನ್ನೂ ಪಶುಪಾಲನೆಯನ್ನೂ, ನಗರ ಕಟ್ಟುವುದನ್ನು ಕಲಿತರು. ಅದಾಗಲೇ ನಾಗರಿಕತೆ ಉಗಮಗೊಂಡವು. ಐದು ಸಾವಿರ ವರ್ಷಗಳ ಹಿಂದೆ ಬರವಣಿಗೆ ಮೊದಲಾಯಿತು. ತೀರಾ ಇನ್ನೂರು ವರ್ಷಗಳ ಹಿಂದೆ ಔದ್ಯೋಗಿಕ ಸಮಾಜವು ಅಸ್ತಿತ್ವಕ್ಕೆ ಬಂದಿತು.

ನಾವಿಂದು ಇಲ್ಲಿದ್ದೇವೆ. ಈಗಲೂ ನಮ್ಮ ವಿಕಾಸದ ಹೆಜ್ಜೆಗಳನ್ನು ಹುಡುಕುತ್ತಿದ್ದೇವೆ.

<><><>